

ಇಂಡಿಯನ್ ಓವರ್‌ಸೀಸ್ ಬ್ಯಾಂಕ್

(ನಿಮ್ಮ ಅಭಿವೃದ್ಧಿಗೆ ಉತ್ತಮ ಸ್ನೇಹಿತ)

ಐ.ಓ.ಬಿ.ಯ "ಮಲ್ಟಿಪಲ್ ಠೇವಣಿ ಯೋಜನೆ" ಯನ್ವಯ
ನಿಮ್ಮ ಕನಿಷ್ಠ ಠೇವಣಿಯಾದ ರೂ. 25/- ಸಹ
ಶೇಕಡಾ 14·4 ಬಡ್ಡಿ ಗಳಿಸುತ್ತದೆ

ಹಾಗೂ

ಐ.ಓ.ಬಿ.ಯ ನೂತನ "ಚೆಕ್ ಕಾರ್ಡ್ ಸೇವೆ" ನಮ್ಮ ಒಂದು
ಸಾವಿರ ಶಾಖೆಗಳಲ್ಲಿ ಚೆಕ್‌ಗಳ ಮೂಲಕ ನಿಮ್ಮ
ಹಣವನ್ನು ಪಡೆಯಲು ಸಹಕಾರಿಯಾಗಿದೆ.

ವಿವರಗಳಿಗಾಗಿ ದಯವಿಟ್ಟು ನಿಮ್ಮ ಸಮೀಪದ
ಇಂಡಿಯನ್ ಓವರ್‌ಸೀಸ್ ಬ್ಯಾಂಕ್
ಶಾಖೆಗೆ ಭೇಟಿ ನೀಡಿ.

ಐಓಬಿಗೆ ಬನ್ನಿ!
ನಿಮಗಾಗಿ ನಮ್ಮಲ್ಲಿ ಅತ್ಯುತ್ತಮ ಯೋಜನೆಗಳಿವೆ !!

# ಸಿದ್ಧಗಂಗಾ

ಸಂಪುಟ-೨೦ ಸಂಚಿಕೆ- ೪-೫ ಏಪ್ರಿಲ್-ಮೇ ೧೯೮೪

## ಶ್ರೀ ಸಿದ್ಧಗಂಗಾ ಮಹಿಮ್ನಃ ಸ್ತೋತ್ರ

—ಆಸ್ಥಾನ ವಿದ್ವಾನ್ ಎಂ. ಜಿ. ಸಂಜುಂಡಾರಾಧ್ಯ

ಶ್ರೀ ನಿರಂಜನ ಪರಮ ಪಾವನ
ಮಾನಸೋದ್ಭವದಹನ ವಿಬುಧವಿ
ತಾನ ವಂದಿತ ಚರಣ ಸುಗುಣಾಭರಣ ಕಲಿಹರಣ।
ಮೌನಿ ವೃಂದಾವರಣ ವರಸುಜ್ಞಾನ
ಮಂದಿರ ಜಗವ ರಕ್ಷಿಕೆ
ಸಾನುರಾಗದೊಳ್ತಲ್ಲಮಪ್ರಭುರಾಯನ ನವರತ॥

ಶರಣ ಮಾನಸ ಹಂಸ ಸುಗುಣಾ-
ಭರಣ ಸುಜನೋತ್ತಂಸ ಭಕುತರ
ದುರಿತ ಕುಲವಿಧ್ವಂಸ ಬುಧಜನವಿನುತ ಪರಹಂಸ।
ವರ ನಿರಂಜನ ಪರತರಾಮಯ-
ಹರನು ಜಂಗಮ ಚಿತ್ಸ್ವರೂಪನು
ಗುರುವು ಗೋಸಲ ಸಿದ್ಧದೇಶಿಕನೀಗೆ ಮಂಗಲವ॥

## ಈ ಸಂಚಿಕೆಯಲ್ಲಿ







## ಶ್ರೀವಾಣಿ

ಸುಮಾರು ಎಂಟು ನೂರ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಹ ಸಂಪಾದಕರು

ಪಿ. ಎನ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 201-00 ರೂ

1984 ನೇ ಜನವರಿಯಿಂದ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಭಾರತೀಯರು ಕೂಡಿಬಾಳುವುದನ್ನು ಎಂದೂ ಕಲಿಯಲಿಲ್ಲ. ಇತಿಹಾಸ ಪುರಾಣಗಳ ಕಾಲದಿಂದಲೂ ನೋಡಿದರೆ ಈ ಮಾತು ಸತ್ಯವೇ ಆಗಿದೆ. ಭಾರತವನ್ನು ಹಲವು ದೇಶಗಳನ್ನಾಗಿ ವಿಂಗಡಿಸಿದುದೂ, ಅವರು ಪರಸ್ಪರ ಕಚ್ಚಾಡಿದುದೂ, ಪರಕೀಯರು ಇಲ್ಲಿ ನುಗ್ಗಿ ಇವರನ್ನೆಲ್ಲ ಬಗ್ಗು ಬಡಿದದ್ದು, ಲೂಟಿಮಾಡಿದ್ದು, ಕೊನೆಗೆ ಇಲ್ಲಿಯೇ ಬೇರುಬಿಟ್ಟದ್ದು ಇವೇ ನಮ್ಮ ಹಿಂದಿನ ಚರಿತ್ರೆಯಲ್ಲಿ ತುಂಬಿವೆ. ಇವರಲ್ಲಿ ರಾಷ್ಟ್ರೀಯ ಪ್ರಜ್ಞೆ ಹಿಂದೆ ಖಂಡಿತವಾಗಿ ಇರಲಿಲ್ಲ. ಇವರ ಅಯೋಗ್ಯ ವರ್ತನೆ ಇವರಿಗೆ ಮುಳುಗುನೀರಾಯಿತು. ಭಾರತವನ್ನೆಲ್ಲ ಒಗ್ಗೂಡಿಸಿ ಸಮಗ್ರತೆ ಸಾಧಿಸಿದ ಮಹಾಪುರುಷರು ಹುಟ್ಟಲಿಲ್ಲ; ಹುಟ್ಟಿದರೂ ಸಮಗ್ರತೆ ವಾಲುಕ ಬಂಧ ಜೀವನದೀ ಪ್ರವಾಹಸ್ಯ ಎಂಬಂತಾಯಿತು. ಇಪ್ಪತ್ತನೆಯ ಶತಮಾನದಲ್ಲಿ ಭಾರತೀಯರು ಅಂಥ ಅದ್ಭುತ ಪವಾಡ ಸಾಧಿಸಿದರೇನೋ ನಿಜ. ಆದರೆ ಇವರ ರಾಷ್ಟ್ರೀಯ ಪ್ರಜ್ಞೆಯೂ ಕಳೆದ 36 ವರ್ಷಗಳ ಅವಧಿಯಲ್ಲಿ ನುಚ್ಚುನೂರಾಗಿ ಹೋಗಿದೆ. ಕೆಟ್ಟಗುಣ ಸುಟ್ಟರೂ ಹೋಗದು.

ಭಾಷೆ, ಜಾತಿ, ಪಕ್ಷ, ವ್ಯಕ್ತಿಪ್ರತಿಷ್ಠೆಗಳಿಗೆ ಸ್ವತಂತ್ರ ಭಾರತದ ಇಂದಿನ ಮೂರ್ಖ ಜನತೆ ಮತ್ತು ಈ ರಾಷ್ಟ್ರದ ಐಕ್ಯವನ್ನು ಭಂಗಗೊಳಿಸಿಬಿಟ್ಟಿದ್ದಾರೆ. ಭಾಷಾನೀತಿಯಿಂದ ಆಕ್ರಮಗಳ ಪ್ರಾರಂಭವಾಗಿವೆ. ಪರಸ್ಪರ ವಾಚಾಮಗೋಚರವಾಗಿ ದೂಷಿಸಿ ಚಾಯಿ ಚಾಪಲ್ಯ ತೀರಿಸಿಕೊಳ್ಳುತ್ತಿದ್ದಾರೆ. ರಾಜ್ಯ ರಾಜ್ಯಗಳಲ್ಲಿ ಸಾಮರಸ್ಯ ಮಾಯವಾಗಿದೆ. ಹಿಂದಿನ ತುಂಡುರಾಜರ ಕಾಲದ ದೊಡ್ಡಸ್ತಿಕೆಯ ಮಾತನಾಡಿಕೊಂಡು ರಾಜ್ಯ ರಾಜ್ಯಗಳಲ್ಲಿ ಕಚ್ಚಾಟ ಪ್ರಾರಂಭಿಸಿ ರಾಷ್ಟ್ರೀಯ ಭಾವೈಕ್ಯ ನಾಶ, ಆರ್ಥಿಕ ಹಾನಿ ವ್ಯರ್ಥ ಆಲಾಪಗಳಲ್ಲಿ ಮುಳುಗಿರುವ ಈ ಜನ ಮುಂದೆ ಯಾವ ಅಪಾಯಗಳನ್ನು ಕಾಣಬೇಕಾಗಿದೆಯೋ ದೇವರೇ ಬಲ್ಲ. ಕರ್ನಾಟಕ, ಮಹಾರಾಷ್ಟ್ರ ಭಾಷಾವಿವಾದವಿದೆ. ಆಸ್ಸಾಂ, ಪಂಜಾಬ, ಬಿಹಾರ, ಮೊದಲಾದ ಕಡೆಗಳಲ್ಲಿನ ರಾಜಕೀಯ ಜೀವನ ಹದಗೆಟ್ಟಿದೆ. ಅಂತರ್ಯುದ್ಧ ಜನ ಜನದಲ್ಲಿ ತಕ್ಕಾಡುತ್ತಿದೆ. ಪಾಂಜಾಬು ಆಸ್ಸಾಮಗಳ ಪರಿಸ್ಥಿತಿ ರಾಷ್ಟ್ರೀಯ ಸಮಗ್ರತೆಯ ದೃಷ್ಟಿಯಿಂದ ಅಪಾಯಕಾರಿ ಹಂತದಲ್ಲಿವೆ. ಕೆಲವು ಜನ ವಾಕ್ ಸ್ವಾತಂತ್ರ್ಯ ಅಭಿಪ್ರಾಯ ಸ್ವಾತಂತ್ರ್ಯದ ದುರುಪಯೋಗಪಡೆದು ರಾಷ್ಟ್ರೀಯ ಭಾವೈಕ್ಯ ನಾಶಮಾಡಿಬಿಟ್ಟಿದ್ದಾರೆ. ಒಡೆದ ಕನ್ನಡಿ, ಮುರಿದ ಮನ, ಪುನಃ ಸರಿಯಾಗುವುದು ಕಷ್ಟ. ಹಿಂದಿನ ಚರಿತ್ರೆಯಿಂದ ನಾವು ಪಾಠ ಕಲಿತಿರುವೆವೆ? ನಾವು ವಿದ್ಯಾವಂತರೇ? ಪ್ರಜ್ಞಾಶೀಲರೇ, ಭಾರತೀಯರೆ? ನಾವು ನಾವೇ ಎದೆಮುಟ್ಟಿ ನೋಡಿಕೊಳ್ಳಬೇಕು.

ನಾವು ಕೇವಲ ಪುರಾಣದ ಕಥೆಗಳನ್ನು ಹೇಳಿಕೊಂಡು ಪೌರುಷ ಕೊಚ್ಚಿ

ಕೊಂಡು ಇಲ್ಲಿ ಸಲ್ಲದ ನೂರಾರು ದೇವತೆಳನ್ನು ಸೃಷ್ಟಿಸಿ, ಮೂಢನಂಬಿಕೆ, ಕೆಟ್ಟ ಸಂಪ್ರದಾಯಗಳದಾಸರಾಗಿ ಸತ್ಯದ ಅನಹೇಳನಮಾಡುತ್ತಿದ್ದೇವೆ. ತರ್ಕಬುದ್ಧಿಗೆ ಕಡಿವಾಣಹಾಕಿದ್ದೇವೆ, ವೈಜ್ಞಾನಿಕ ಸತ್ಯಕ್ಕೆಮಣ್ಣೆರಚಿದ್ದೇವೆ. ಆದ್ದರಿಂದಲೇ ಈ ದೇಶದ ಸಾಮಾನ್ಯ ಜನಗಳ ಬುದ್ಧಿ ಕೆಳಸ್ತರದಲ್ಲಿ ಯೋಚಿಸುತ್ತದೆ. ಪ್ರಬುದ್ಧ ಬುದ್ಧಿ ಪ್ರಬುದ್ಧವಾಗಿ ಯೋಚಿಸುತ್ತದೆ. ಅಧಿಕಾರಕ್ಕೆ ಅರ್ಥಕ್ಕೆ ಕಚ್ಚಾಡುವ ಈ ಜನ ಉದ್ಧಾರದಲ್ಲಿ ಮುಳುಗಿ ದೇಶವನ್ನು ಬಡಕಲು ಪಶುವನ್ನಾಗಿಸಿದ್ದಾರೆ. ಬಡಕಲು ಪಶುವಿನ ಗತಿಏನಾಗುವುದು ಗೊತ್ತೇ ಇದೆ.

ಮಳೆಗಾಲದಲ್ಲಿ ನಾಯಿಕೊಡೆಹುಟ್ಟುವಂತೆ ಹುಟ್ಟುಕೊಂಡಿರುವ ರಾಜಕೀಯ ಪಕ್ಷಗಳಿಂದ ಜನತೆಯಲ್ಲಿ ಭಾವೈಕ್ಯ ಗುರಿ ಹೋಗಿದೆ. ಎರಡಕ್ಕಿಂತ ಹೆಚ್ಚು ಪಕ್ಷಗಳು ಪ್ರಜಾಪ್ರಭುತ್ವದಲ್ಲಿ ಅಪಾಯಕಾರಿ ಈಗ ಹುಟ್ಟಿರುವ ಅನೇಕ ಪಕ್ಷಗಳು ವ್ಯಕ್ತಿನಿಷ್ಠವೇ ವಿನಾ ಬೇರಿಲ್ಲ. ಅನೇಕ ಸಮಸ್ಯೆಗಳ ಭಾರತವನ್ನು ಪ್ರಜಾಪ್ರಭುತ್ವ ಪದ್ಧತಿಯಿಂದ ಪ್ರಬುದ್ಧಗೊಳಿಸುವುದಂತೂ ಅಸಾಧ್ಯದ ಮಾತೆಂಬುದನ್ನು ಈಗ ವಿಧಿಯಿಲ್ಲದೆ ಆಡಲೇ ಬೇಕಾಗಿದೆ. ಈ ಪದ್ಧತಿಯಿಂದ ಇದರ ವಿನಾಶ ಖಂಡಿತ. ಆದ್ದರಿಂದ ಭಾರತೀಯರು ಬೇಗ ಎಚ್ಚತ್ತು. ರಾಷ್ಟ್ರೀಯ ಸಮಗ್ರ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು; ಸಮೃದ್ಧ ಭಾರತ ಕಟ್ಟುವ ಸಂಕಲ್ಪವುಳ್ಳ ನಾಯಕನನ್ನು ಗುರುತಿಸಲಿ ಪೂರ್ಣ ಕೆಟ್ಟಮೇಲೆ ಸರಿಪಡಿಸುವುದು ಅಸಾಧ್ಯ. ರೋಗವನ್ನು ರಾಜಕೀಯ ಅವ್ಯವಸ್ಥೆಯನ್ನು ಆಗಾಗಲೇ ಚಿಕಿತ್ಸೆಗೆ ಒಳಗುಪಡಿಸಬೇಕು.

---

## "ಕುವೆಂಪು ಕಂಡ ಬಸವಣ್ಣ"

Social stand point ನಲ್ಲಿ ಬಸವೇಶ್ವರರಷ್ಟು ಅದ್ಭುತವಾಗಿ ಕೆಲಸ ಮಾಡಿದವರು ಯಾರೂ ಇಲ್ಲ ಅಲ್ಲಿ. ಬಸವೇಶ್ವರರು ಹೋದ ಮಟ್ಟಕ್ಕೆ ಈಗಲೂ ಬಂದಿಲ್ಲ ನಾವು. ಅವರು ಒಬ್ಬ ಬ್ರಾಹ್ಮಣಳಾದ ಹುಡುಗಿಯನ್ನು ಒಬ್ಬ ಹೊಲೆಯನಿಗೆ ಮದುವೆ ಮಾಡಿದ್ದಾರೆ. 800 ವರ್ಷಗಳ ಹಿಂದೆ ಏನು ಯಾವ ಧೈರ್ಯದಿಂದ ಮಾಡಿರಬೇಕು? ಏನುಕೆಚ್ಚಿರಬೇಕು ನೋಡಿ ಗೊತ್ತಾಯ್ತೇನು? ನಾವಿನ್ನೂ ಬಂದಿಲ್ಲ ಆ ಮಟ್ಟಕ್ಕೆ. ಬಸವೇಶ್ವರರ ಸಾಮಾಜಿಕ ಪರಿವರ್ತನೆಯನ್ನು ನಮ್ಮ ದೇಶ ಒಪ್ಪಿಕೊಂಡಿದ್ದ ಪಕ್ಷದಲ್ಲಿ ಆವಾಗ ಮುಸ್ಲಿಮರು, ಕ್ರಿಶ್ಚಿಯನ್ನರು ಎಲ್ಲಾ ಬರ್ತಿರಲಿಲ್ಲ ಇಲ್ಲಿಗೆ, ಬರ್ತಿರಲಿಲ್ಲ- ನಾನು ಹೇಳುವ ವಿಶ್ವಮಾನವ ತತ್ವ ಎಂದೋಬರ್ತಿತ್ತು. ಅದಕೋಸ್ಕರ ಇದನ್ನು ಸ್ಪಷ್ಟವಾಗಿ ನಿಷ್ಪಕ್ಷವಾಗಿ ಬರೀರಿ. ಯಾಕೆಂದ್ರೆ ನಮ್ಮಲ್ಲಿ ಅನೇಕ ದೊಡ್ಡ ದೊಡ್ಡ ಸಾಹಿತಿಗಳಿದ್ದಾರೆ. ಸಾಹಿತ್ಯ ದೃಷ್ಟಿಯಿಂದ ಮಹೋನ್ನತರೂ ಹೌದು. ಅದೇ ಈ ದೃಷ್ಟಿಯಿಂದ ಮತ್ತೂ ಸಂಪ್ರದಾಯಕ್ಕೆ ಕಟ್ಕೊಂಡಿದ್ದಾರೆ. ಅಂಟಿಕೊಂಡಿದ್ದಾರೆ.

ಭಾನುವಾರ, 25, ಡಿಸೆಂಬರ್, 1983 ಕನ್ನಡಪ್ರಭ

—ಕುವೆಂಪು



# ★ ನವನೀತ ★

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

(೧) ಮಾತೃವತ್ಪರದಾರೇಷು ಪರದ್ರವ್ಯೇಷು ಲೋಷ್ಟವತ್ ।
ಆತ್ಮವತ್ಸರ್ವ ಭೂತೇಷು ಯಃ ಪಶ್ಯತಿ ಸ ಪಂಡಿತಃ ॥

ಪರನಾರಿಯರ ತನ್ನ ತಾಯಂದಿರೆಂದು
ಪರರೊಡವೆ ಕಸಕಿಂತ ಕಡೆಯೊಂದು ಒಗೆದು
ತನ್ನಂತೆ ಇನ್ನುಳಿದ ಜೀವಿಗಳು ಎಂದು
ಮನ್ನಿಸುವ ಮನುಜನೇ ಜ್ಞಾನಿ ಎಂದೆಂದೂ ॥

* * *

(೨) ಯಥಾ ಹ್ಯೇಕೇನ ಚಕ್ರೇಣ ನ ರಥಸ್ಯ ಗತಿರ್ಭವೇತ್ ।
ಏವಂ ಪುರುಷಕಾರೇಣ ವಿನಾ ದೈವಂ ನ ಸಿಧ್ಯತಿ ॥

ಒಂದೆ ಚಕ್ರವನುಳ್ಳ ರಥವು ಹೇಗೆ
ಮುಂದೆ ಚಲಿಸದೆ ಇಹುದೊ ಅಚಲ, ಹಾಗೆ
ಪುರುಷಯತ್ನವೆ ಇರದ ಯಾವುದೇ ದಂಧೆ
ಫಲಿಸದದು ದೈವಬಲ ವೊಂದರಿಂದೆ ॥

* * *

(೩) ಧರ್ಮಾರ್ಥಕಾಮ ಮೋಕ್ಷಾಣಾಂ ಯಸ್ಯೈಕೋಽಪಿ ನ ವಿದ್ಯತೇ । ಅಜಾಗಲಸ್ತನ ಸ್ಯೈವ ತಸ್ಯ ಜನ್ಮ ನಿರರ್ಥಕಮ್ ॥

ನರನೊಳಗೆ ಧರ್ಮಾರ್ಥ ಕಾಮ ಮೋಕ್ಷ
ಇರದಿರಲು ಒಂದಾದರೂ ಕೊನೆಯ ಪಕ್ಷ
ಆತ ಬಾಳುವ ಬಾಳ್ವೆಗೇನುಂಟು ಅರ್ಥ ?
ಹೋತರಾಯನ ಕೊರಳ ಮಾಲೆಯಂತೆ ಮಾವ್ಯರ್ಥ ।

* * *

—"ಕಾವ್ಯಸುಧಾಪ್ರಿಯ" (ಕೆ. ಜಿ. ರಂಗಯ್ಯ)

# ಚಿಂತನ

## ಮಾನವ ಧರ್ಮ ಮತ್ತು ಕರ್ತವ್ಯ

ಪರಮಾತ್ಮನ ಸೃಷ್ಟಿಯನಲ್ಲಿ ಮಾನವನು ಉತ್ಕೃಷ್ಟಜೀವಿ. ಮಾನವನು ಹುಟ್ಟಿದ ನಂತರ ಒಂದು ದಿವಸ ಸಾಯುವುದು ಖಂಡಿತ. ಸತ್ತನಂತರ ಪುನಃ ಹುಟ್ಟುವುದು ತಪ್ಪದು. ಜ್ಞಾನವನ್ನು ಪಡೆದ ಮನುಷ್ಯಜನ್ಮವೆ ಶ್ರೇಷ್ಠವಾದದ್ದು. ಇಂಥ ಶ್ರೇಷ್ಠಜನ್ಮವನ್ನು ಪಡೆದು ಮೋಕ್ಷವನ್ನು ಪಡೆಯುಲು ಪ್ರಯತ್ನಪಡಬೇಕು ಇಲ್ಲದಿದ್ದಲ್ಲಿ ಅಪಾರ ನಷ್ಟ.

ಮಾನವನಿಗೆ ಅವನ ಮನಸ್ಸಿನಲ್ಲಿ ಯಾರು ಎಲ್ಲಿಂದ ಬಂದೆ. ಎಲ್ಲಿಗೆ ಹೋಗುತ್ತೇನೆ ಎಂಬ ಪ್ರಶ್ನೆಗಳು ಒಂದಲ್ಲ ಒಂದು ಕಾಲದಲ್ಲಿ ಹುಟ್ಟುತ್ತವೆ. ಅವುಗಳಿಗೆ ಉತ್ತರವನ್ನು ಋಷಿಗಳು ಬರೆದಿರುವ ಶಾಸ್ತ್ರಗಳ ಪಠಣೆಯಿಂದ ತಿಳಿಯಬೇಕು. ಮತ್ತು ಅವುಗಳ ಪಠಣೆಯಿಂದ. ದೇವರು ಯಾರು ಅವನು ಇರುವುದು ಎಲ್ಲಿ. ಅವನನ್ನು ನೋಡುವುದಕ್ಕೆ ಏನುಮಾಡಬೇಕು ಎಂಬ ಪ್ರಶ್ನೆಗಳಿಗೆ ಉತ್ತರ ದೊರಕುವುದು.

ದೇವರು ಸರ್ವಾಂತರ್ಯಾಮಿ ಎಂದು ಹಿಂದೂ ಧರ್ಮ ಸಾರುತ್ತಿದೆ. ಭೂಮಿಯಲ್ಲಿರುವ ಸಮಸ್ತವೂ ಭಗವಂತನಿಂದ ವ್ಯಕ್ತವಾಗಿರುತ್ತೆ. ತನ್ನದು ತನಗೆ ಎನ್ನುವುದನ್ನು ಬಿಟ್ಟರೆ ಸ್ವಧರ್ಮವಾದ ಕೆಲಸಗಳನ್ನು ಭಗವದರ್ಪಿತವಾಗಿ ಮಾಡುತ್ತ ಸಿದ್ಧಿಯನ್ನು ಪಡೆಯಬೇಕು.

ದೇವರನ್ನು ಹೊರಗಡೆ ಹುಡುಕುವುದು ಅಜ್ಞಾನ, ದೇವರು ತನ್ನಲ್ಲಿಇರುವನು ಎಂದು ತಿಳಿಯುವುದೆ ಜ್ಞಾನ. ಯಾರು ದೇವರನ್ನು ತಮ್ಮ ಹೃದಯದಲ್ಲಿ ಆರಾಧನೆ ಮಾಡಲಾರರೋ ಅವರಿಗೆ ಭಕ್ತಿಯನ್ನು ಹುಟ್ಟಿಸಿ ದೇವರ ನೆನಪನ್ನು ಆತನಕಡೆಗೆ ತಿರಿಗಿಸುವುದೇ ದೇವಾಲಯಗಳ ಉದ್ದೇಶ.

ಭಗವಂತನಲ್ಲಿ ಪ್ರೀತಿ ಇರುವುದೇ ಭಕ್ತಿ, ಭಕ್ತಿಯಿಂದ ಮುಕ್ತಿ. ಇಪ್ಪತ್ನಾಲ್ಕು ಗಂಟೆಯೂ ಭಗವಂತನ ಧ್ಯಾನದಲ್ಲಿರುವವರಿಗೆ ಪಾಪನಿವಾರಣೆ ಆಗಿ ಮುಕ್ತಿ ದೊರೆಯುವುದು. ದೇಹರ ಪ್ರಾರ್ಥನೆ ನಿತ್ಯಕರ್ಮ ಪೂರ್ವ ಅಥವ ಉತ್ತರ ಮುಖವಾಗಿ ಕುಳಿತು ಪರಮಾತ್ಮನನ್ನು ಪ್ರಾರ್ಥಿಸಬೇಕು. ಜ್ಞಾನಿಯಾದ ಗುರುವಿನಿಂದ ಮಂತ್ರವನ್ನು ಪಡೆದು ಅದನ್ನು ಪಠಿಸಬೇಕು. ಆ ಮಂತ್ರವೆ ದೇವರ ಹೆಸರು. ಮೊದಲು ಸಾಕಾರದಲ್ಲಿ ಧ್ಯಾನಿಸಿ ಕ್ರಮೇಣ ಸರ್ವವ್ಯಾಪಕತ್ವವನ್ನು ಅಳವಡಿಸಿಕೊಳ್ಳಬೇಕು. ಶ್ರದ್ಧೆಯಿಂದ ಪ್ರತಿನಿತ್ಯವೂ 10–15 ನಿಮಿಷವಾದರೂ ಬಿಡುವುಮಾಡಿಕೊಂಡು ದೇವರ ಪ್ರಾರ್ಥನೆಮಾಡಬೇಕು.

—ಬಿ. ಎನ್. ಮಲ್ಲಪ್ಪ





## ಗ್ರಾಮಾಂತರ ಬಸವಜಯಂತಿ

—ವರದಿ ಹೆಚ್. ವಿ. ವೀರಭದ್ರಯ್ಯ.

ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳು ರೂಪಿಸಿಕೊಂಡ ವಿಶಿಷ್ಟ, ವಿನೂತನ ಯೋಜನೆ. ಸೇವಾ ಮುಖದ ಮತ್ತೊಂದು ಮಜಲು, ಮಹತ್ವಪೂರ್ಣ. ಅಂತೆಯೇ ಅರ್ಥಪೂರ್ಣ. ಗ್ರಾಮಾಂತರ ಪ್ರದೇಶಗಳಲ್ಲಿ ಬಸವತತ್ವ ಪ್ರಚಾರ–ಯೋಜನೆಯ ಉದ್ದೇಶ. ಶ್ರಮ ಸಾರ್ಥಕವಾಗುತ್ತಿರುವ ಪ್ರತಿಕ್ರಿಯೆ; ಇಪ್ಪತ್ನಾಲ್ಕು ಗಂಟೆಗಳ ನಿರಂತರ ಬಸವಸ್ಮರಣೆ. ಉಪನ್ಯಾಸ, ಪ್ರವಚನ, ವಚನ ಗಾಯನ, ಆಶೀರ್ವಚನ, ನಾಟಕ. ಎಲ್ಲ ಬಸವಣ್ಣನವರ ಜೀವನಕ್ಕೆ, ಸಂದೇಶಕ್ಕೆ ಮೀಸಲು. ಗ್ರಾಮೀಣ ಬಂಧು-ಭಗಿನಿಯರು ಶರಣರ ಜೀವನ ಸಂದೇಶಗಳಿಂದ ವಂಚಿತರಾಗಬಾರದೆಂಬ ಕಳಕಳಿ. ಇದಕ್ಕಾಗಿ ಸಹಸ್ರಾರು ರೂಪಾಯಿಗಳ ಧಾರಾಳ ವಿನಿಯೋಗ. ಕಾರ್ಯಕ್ರಮದಲ್ಲಿ ತೊಡಗಿರುವ ಶ್ರೀ ಶ್ರೀಗಳವರಿಗೆ ಈಗ ಎಪ್ಪತ್ತೇಳು ವರ್ಷ. ಹಣ್ಣಾದ ವಯಸ್ಸು. ಆದರೆ ಇಪ್ಪತ್ತೇಳರ ಯುವಕರ ಉತ್ಸಾಹ. ಬಸವ ಭಕ್ತಿಯ ಬೆಳಕಿನಕಂಬ ಅವರು ದಿನವೆಂದರಿಯೆ, ವಾರವೆಂದರಿಯೆ, ಹಗಲೆಂದರಿಯೆ, ಇರುಳೆಂದರಿಯೆ, ಚಳಿಯೆಂದರಿಯೆ, ಮಳೆಯೆಂದರಿಯೆ ಬಿಸಿಲೆಂದರಿಯೆ, ಗಾಳಿಯೆಂದರಿಯೆ, ಎಂಬ ನಿಸ್ಸೀಮ ನಿಷ್ಠೆ ಬಸವ ಸಂದೇಶ ಮಣಿಹದಲ್ಲಿ.

ಯೋಜನೆ ರೂಪಿತವಾದದ್ದು 1979 ರಲ್ಲಿ. ಪಂಚವಾರ್ಷಿಕ ಯೋಜನೆಯಲ್ಲ ಇದು. ಸೇವಾ ಜೀವನದ ದೀರ್ಘಯೋಜನೆ. ಶ್ರೀ ಶ್ರೀ ಗಳವರ ಅತೀವ ತೀವ್ರ ತುಡಿತದ ಪರಿಣಾಮ. ತಪಸ್ವಿಗಳ ಚಿಂತನೆಯ ಸತ್ವಪೂರ್ಣ ಯೋಜನೆ. ಎಂದೇ ವರ್ಷದಿಂದ ವರ್ಷಕ್ಕೆ ಜನಪ್ರಿಯ. ಆಕರ್ಷಕ, ಮೇಲಾಗಿ ಬೋಧನಾತ್ಮಕ ಜ್ಞಾನ ಕ್ರಿಯೆಗಳ ಸಂಗಮ. ಕಾರ್ಯಕ್ರಮ–ಈಗಾಗಲೇ ಒಂದು ನೂರಾ ಇಪ್ಪತ್ತೈದು ಕಾರ್ಯಗಳಲ್ಲಿ ಜರುಗಿದೆ ಬಸವ ಜಯಂತಿ. ಅದೊಂದು ಅಪೂರ್ವ ಭಕ್ತಿಯ ಸಾಕಾರಸಮ್ಮೇಳನ. ಜನ ಸಂದಣಿಯ ಮಹಾಪೂರ. ಅನೇಕ ಗ್ರಾಮಗಳಲ್ಲಿ ಕುಡಿಯುವ ನೀರಿನ ಅಭಾವ ತಲೆದೋರುವಷ್ಟು ಜನ. ನೆರೆಗ್ರಾಮಗಳಿಂದ ನೀರಿನ ಪೂರೈಕೆ. ಎಲ್ಲ ಹೃದಯ ವಂತಿಕೆಯಿಂದ ನಡವ ಕೆಲಸ. ಪೋಲಿಸರ ನೆರವಿಲ್ಲ, ಕಳ್ಳತನದ

ಮಾತಿಲ್ಲ, ಊಟವಿಮಾಡಲಿಲ್ಲ ಎಂಬ ಒಬ್ಬರೇ ಒಬ್ಬರು ಸಿಕ್ಕಲಿಲ್ಲ ಬಸವಣ್ಣ ಬಾಳಿದ್ದು 12 ನೇ ಶತಮಾನದಲ್ಲಿ. ಬೆಳೆದದ್ದು 20 ನೆಯಶತಮಾನದಲ್ಲೂ. ಅದೊಂದು ಅಕ್ಷಯ ವ್ಯಕ್ತಿತ್ವ ಅದ್ಭುತ ಚೇತನ ಎಂದೇ ಕಾರ್ಯಕ್ರಮಕ್ಕೆ ಇನ್ನಿಲ್ಲದ ಕಳೆ, ಬೆಳಕು. ಎಲ್ಲದರ ಉಸ್ತುವಾರಿ ಶ್ರೀ ಶ್ರೀ ಗಳಿಂದಲೇ. ಇಷ್ಟೆಲ್ಲ ಏಕೆ ? ಇದರಿಂದ ಏನಾದೀತು ? ಈ ಕಾಲಕ್ಕೆ ಇದು ಸರಿಯೇ ? ಭಾಷಣಗಳಿಂದ, ಪ್ರವಚನಗಳಿಂದ ಜನರನ್ನು ತಿದ್ದುವುದಾದೀತೇ ? ಎಂಬ ಪ್ರಶ್ನೆಗಳು. ಸಹಜವೇ. ಆದರೆ ಶ್ರೀ ಶ್ರೀ ಗಳದು ಅದಕ್ಕೊಂದೇ ಉತ್ತರ, " ಬಸವತತ್ವಾನುಸರಣೆಯೊಂದೇ ಇಂದಿನೆಲ್ಲ ಸಮಸ್ಯೆಗಳಿಗೆ ಸಮರ್ಥ ಪರಿಹಾರ " ವೆಂದು ಯುವ ಜನತೆ ಜಾಗೃತವಾದರೆ ಸಾಕು, ಹತ್ತು ಜನ ಕ್ರಿಯಾಶೀಲರಾದರೆ ಸಾಕು ಕಾರ್ಯಕ್ರಮ ಸಾರ್ಥಕವಾದಂತೆ ಎನ್ನುತ್ತಾರೆ.

24-3-84. ಕಂಬತ್ತನಹಳ್ಳಿ, ಕಾರ್ಯಕ್ರಮಕ್ಕೆ ತನ್ನನ್ನೊಡ್ಡಿಕೊಂಡಿತು. ಅದರ ಪುಣ್ಯ. ಕಳಶ, ಕನ್ನಡಿಗಳಿಂದ ಶ್ರೀ ಶ್ರೀ ಗಳವರಿಗೆ ಸ್ವಾಗತ. ಮಂಗಳ ವಾತಾವರಣ. ಉತ್ಸಾಹದ ಉತ್ಸವ. ಮುತ್ತೈದೆಯರ ಮುತ್ತಿನಾರತಿ. ಬಸವ-ಮಂಟಪಕ್ಕೆ ಆಗಮನ. ಸಭೆಯಲ್ಲಿ ಸುಮಾರು ಹತ್ತು ಸಾವಿರ ಭಕ್ತಸಮೂಹ. ನಿಶ್ಶಬ್ದ ಸಭ್ಯ ಪರಿಸರ. ನಾಗರತ್ನ ಸಂಗಡಿಗರು ಮತ್ತು ಶ್ರೀ ಪುಟ್ಟಯ್ಯನವರಿಂದ ಪ್ರಾರ್ಥನೆ. ಶ್ರೀ ಪಿ ಎಸ್. ಸದಾಶಿವಯ್ಯನವರಿಂದ ಸ್ವಾಗತ. "ಬಸವಣ್ಣ ಬೇರೆಯಲ್ಲ; ಶ್ರೀ ಶ್ರೀ ಗಳು ಬೇರೆಯಲ್ಲ" ಭಕ್ತಿ ನುಡಿಕುಸುಮಾಂಜಲಿಯೊಂದಿಗೆ ಹೃತ್ಪೂರ್ವಕ ಸ್ವಾಗತ. ಕನಕಪುರ ಮಠಾಧ್ಯಕ್ಷರಾದ ಶ್ರೀ ಶ್ರೀ ಮುಮ್ಮಡಿನಿರ್ವಾಣಸ್ವಾಮಿಗಳವರಿಂದ ಸಮಾರಂಭದ ಉದ್ಘಾಟನೆ. ಇದೊಂದು ಅಪರೂಪದ ಕಾರ್ಯಕ್ರಮ ಎಂಬ ಶ್ರೀ ಶ್ರೀಗಳವರ ಮೆಚ್ಚುಗೆ, ಅರ್ಚನ, ಅರ್ಪಣ ಅನುಭಾವಗಳ ಸಂಗಮ: ಬಸವಜಯಂತಿ' ಶ್ರೀ ಶ್ರೀ ಗಳವರೆಂದರು.

ದೇಶದ ಆತ್ಮ ಹಳ್ಳಿಗಳಲ್ಲಿದೆ; ಅದಕೆಲ್ಲಾ ರೈತರಲ್ಲಿದೆ. ಆದಕ್ಕಾಗಿ ಆತ್ಮವಿರುವ ಕಡೆ ಅಣ್ಣನ ಜಯಂತಿ ಆಚರಣೆ ಔಚಿತ್ಯ ಪೂರ್ಣವಾಗಿದೆ. ಸೌಜನ್ಯ ಕಲಿಸದ ಶಿಕ್ಷಣ ಇಂದು ಸಾಗಿದೆ; ಭೋಗಮುಖವಾಗಿನಡೆದಿದೆ, ಮಾನವೀಯತೆಯನ್ನು ಅದು ಕಲಿಸುತ್ತಿಲ್ಲ. ಅದರ ಅರಿವು ಜಯಂತಿಯಿಂದ ನಡೆದಿದೆ. ಇದು ತುಂಬ ಮಹತ್ವದ್ದು. ಎಂದವರು ರಾಣಿಬೆನ್ನೂರಿನ ಪ್ರೊ. ವಿ. ವೀ. ಸಂಗಮದಅವರು

ಭಗವಾನ್ ಬುದ್ಧ – ಬಸವರಿಬ್ಬರೇ ಜಗದ ಜನತೆಯನ್ನು ಗೌರವಗಳಿಂದ ಕಂಡವರು. ಇಹದ ಬದುಕನ್ನು ಗೌರವಿಸಿದ ಧೀಮಂತರು. ಬಸವಣ್ಣ ಒಬ್ಬ ಸಮಾಜವಿಜ್ಞಾನಿ. ಸಮಾಜವೇ ಆತನಿಗೆ ಪ್ರಯೋಗಶಾಲೆಯಾಗಿತ್ತು. ವಿಜ್ಞಾನಿಗಳಲ್ಲಿರುವ ವೈಚಾರಿಕತೆ ಬಸವಣ್ಣನವರಲ್ಲಿತ್ತು ಮೌಢ್ಯಗಳನ್ನು ವಿರೋಧಿಸಿದವರು ಅವರು ಶ್ರೀ. ಡಿ. ರಾಮಪ್ಪನವರು ನುಡಿದರು.



ಮಾನವ ಕುಲದ ಮಾಂಗಲ್ಯ ಬಸವಣ್ಣ. ಉತ್ತಮ ರಾಜತಾಂತ್ರಿಕಜ್ಞ. ಆಡಳಿತದಲ್ಲಿ ಸಮರ್ಥ. ದೂರದರ್ಶಿ. ದಯದ ಬುನಾದಿಯ ಮೇಲೆ ಧರ್ಮಸೌಧ ನಿರ್ಮಿಸಿದ ಮಹಂತ. ಅನುಭವ ಪ್ರಧಾನವನ್ನಾಗಿಸಿದಧರ್ಮವನ್ನು. ಆದಕ್ಕಾಗಿ ಅನುಭವ ಮಂಟಪವನ್ನೇನಿರ್ಮಿಸಿದ. ಎಲ್ಲ ಕಲೆತು ಕಲಿಯುವಂತೆ ಮಾಡಿದ. ಕರ್ನಾಟಕಕ್ಕೆ ಎಂದೆಂದೂ ಅಳಿಯದಂಥ ಕೀರ್ತಿತಂದುಕೊಟ್ಟ ಎಂಬ ನುಡಿಗಳನ್ನಾಡಿದವರು ಶ್ರೀ. ಬಿ. ವೀರಭದ್ರಯ್ಯಅವರು.

ಬಸವಣ್ಣ ಬದುಕಿದ್ದು ಐವತ್ತಾರು ವರುಷಗಳು. ಕಲ್ಯಾಣದ ಕ್ರಾಂತಿಯನಂತರವೂ ಅವರು ಜೀವಿಸಿದ್ದರು ಎಂದರು ಶ್ರೀ. ಕೆ. ಪಿ. ಶಿವಲಿಂಗಯ್ಯನವರು. ಬಸವಣ್ಣನವರನ್ನು ಕುರಿತು ಬಂದಿರುವ ಬಸವಸಾಹಿತ್ಯದ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು.

ಗ್ರಾಮೀಣ ಗರತಿಯರು ಕಂಡ ಬಸವಣ್ಣ ಆತ್ಮೀಯನಾದವನು. ಅವನು ದೇವರಲ್ಲ. ರಕ್ತ ಬಂಧು, ನಮ್ಮ ಅಣ್ಣ. ಮಾನವೀಯತೆಯ ಗಂಧಮೂರ್ತಿ. ನಮ್ಮೊಂದಿಗೆ ಬಾಳಿ, ಬದುಕಿ, ಹೀಗೆ ಬದುಕಿ ಎಂದು ಆಡಿದ, ಆಚರಿಸಿ ತೋರಿಸಿದ ಏಕೈಕ ಧರ್ಮದೀಪಕ ಎಂದವರು ಶ್ರೀ ಹೆಚ್. ವಿ. ವೀರಭದ್ರಯ್ಯ. ಜನಪದ ಹಾಡುಗಳಲ್ಲಿ ಬಸವಣ್ಣನನ್ನು ಚಿತ್ರಿಸಿದರು.

ಬಸವಣ್ಣ ಕೇವಲ ಸಮಾಜ ವಿಜ್ಞಾನಿಯಲ್ಲ; ಅವನೊಬ್ಬ Spiritual Scientist ಎಂದರು ಶ್ರೀ ಶ್ರೀ ಗಳವರು ತಮ್ಮ ಆಶೀರ್ವಾದದಲ್ಲಿ. ಬಸವಣ್ಣ ಕಲಿಸಿದ್ದು ಕಾಯಕವನ್ನು, ದಾಸೋಹ-ಭಾವವನ್ನು, ಕ್ರಿಯಾಶೀಲ ಜೀವನವನ್ನು ಮೌಲ್ಯಗಳು ನಾಶವಾಗುತ್ತಿರುವ ಇಂದಿನ ಬದುಕಿಗೆ ಬಸವಣ್ಣನ ಮಾರ್ಗವೊಂದೇ ಸಿಧ್ಧೌಷದ. ವ್ಯಕ್ತಿ ತನ್ನ ಶಕ್ತಿಯನ್ನು ಅರಿತುಕೊಂಡು ಸಮಾಜಕ್ಕೆ ಅರ್ಪಿಸುವತ್ಯಾಗ ಸಂಪನ್ನನಾಗಬೇಕು. ಹಿಂದೂ ಧರ್ಮಕ್ಕೆ ಬಸವಣ್ಣನ ಕೊಡುಗೆ ಅಪಾರವಾದುದು ಕಾಯಕ ಕೇವಲ ಉದರಂಭರಣದಸಾಧಕವಲ್ಲ; ಅದು ಆತ್ಮವಿಕಾಸಕ್ಕೆ ಮಾರ್ಗಪೋಷಕ. ಸಮಾಜವಾದ ಬಿತ್ತಿದವರಲ್ಲಿ ಬಸವಣ್ಣನಂಥ ಶ್ರೇಷ್ಠವ್ಯಕ್ತಿ ಇನ್ನೊಬ್ಬರಿಲ್ಲ. ಪಾಪಿಗಳಿಗೂ ಉದ್ಧಾರದ ಮಾರ್ಗವನ್ನು ತೋರಿಸಿದವನು ಬಸವಣ್ಣ. ಧರ್ಮಸೂತ್ರಕ್ಕೆ ಯೋಗ್ಯ ಮಾರ್ಗವನ್ನು ಆಚರಿಸಿ ತೋರಿಸಿದ ಕೀರ್ತಿ ಅಣ್ಣನಿಗೆ. ಬ್ರಾಹ್ಮಣ್ಯದ ಮಾನದಂಡ ಶೀಲಸಂಪತ್ತು. ಸಮಾಜದ ಪ್ರಗತಿ ಕೇವಲ ಆರ್ಥಿಕ ಸ್ವಾವಲಂಬನೆಯ ವ್ಯಕ್ತಿಯ ನಿಂತಿಲ್ಲ, ಆಧ್ಯಾತ್ಮಿಕ ತಳಹದಿಯ ಮೇಲೆ ಅದು ನಿಂತಿದೆ ಎಂದು ಮೇಲೆ ಆಶೀರ್ವಚನ ನೀಡಿದರು ಅಧ್ಯಕ್ಷಪೀಠದಿಂದ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಗಳವರು.

'ಜಗಜ್ಯೋತಿ ಬಸವೇಶ್ವರ' ನಾಟಕ' 'ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ'. ಸಿದ್ಧಗಂಗಾ ಕ್ಷೇತ್ರದವರಿಂದ ಅಭಿನಯಿಸಲ್ಪಟ್ಟಿತು. ಸುಮಾರು ಇಪ್ಪತ್ತು ಸಹಸ್ರಪ್ರೇಕ್ಷಕರನ್ನು ತೃಪ್ತಿಗೊಳಿಸಿತು ನಾಟಕ.

'ಇಂಥ ಕಾರ್ಯಕ್ರಮಗಳು ಆಗಾಗ ನಡೆದರೆ ಅದೆಷ್ಟೋ ಬುದ್ಧಿ ಬಂದೀತು ನಮ್ಮ ಜನಗಳಿಗೆ' ಎಂಬ ಮಾತು ನಾಟಕ ನೋಡಿ ತಮ್ಮೂರಿಗೆ ಮಾತಾಡಿಕೊಂಡು ಹೋಗುತ್ತಿದ್ದ ಹೆಂಗಸರಿಂದ ಕೇಳಿಸಿಕೊಂಡಾಗ ಮನಸ್ಸು ತುಂಬಿ ಬಂದಿತ್ತು.

'ಆ ನಮ್ಮಪ್ಪ ಸಿದ್ಧಗಂಗೆ ಸ್ವಾಮಿಗಳ್ಸೇವೆ ಕಣವ್ವ ಇದು' ಎನ್ನುತ್ತಿದ್ದ ಇನ್ನೊಬ್ಬಾಕೆ.

ಇದುವರೆವಿಗೂ ನಡೆದ ಗ್ರಾಮಾಂತರ ಬಸವಜಯಂತಿ ಉತ್ಸವಗಳ ಸ್ಥಳಗಳು. ಪ್ರತ್ಯಕ್ಷವರದಿಗಳು ಮುಂದಿನ ಸಂಚಿಕೆಗಳಲ್ಲಿ.

26-3-84 —ಕಂಭತ್ತನಹಳ್ಳಿ, ತುಮಕೂರು ಜಿಲ್ಲೆ
11-4-84 —ಬೆಟ್ಟದಹಳ್ಳಿ, ತುಮಕೂರು ಜಿಲ್ಲೆ
1[illegible]-4-84 —ರಘುವನಹಳ್ಳಿ, ಬೆಂಗಳೂರು ಜಿಲ್ಲೆ
15-4-84 —ಕರಡಿಗವಿಮಠ, ಚಿಕ್ಕಮಗಳೂರು ಜಿಲ್ಲೆ
20-4-84 —ಹರಳೂರು, ತುಮಕೂರು ಜಿಲ್ಲೆ
22-4-84 —ಪುಟ್ಟಸಂದ್ರ, ತುಮಕೂರು ಜಿಲ್ಲೆ
25-4-84 —ಗುಂಡಿಗೆರೆ, ಬೆಂಗಳೂರು ಜಿಲ್ಲೆ
28-4-84 —ಅರಿಯೂರು, ತುಮಕೂರು ಜಿಲ್ಲೆ
1-5-84 —ಹುಂಜನಾಳು, ತುಮಕೂರು ಜಿಲ್ಲೆ
6-5-84 —ನಾಗಶೆಟ್ಟಿಹಳ್ಳಿ, ಬೆಂಗಳೂರು ಜಿಲ್ಲೆ
8-5-84 —ದೊಡ್ಡೇರಿ, ಬೆಂಗಳೂರು ಜಿಲ್ಲೆ
11-5-84 —ಸಾಗರನಹಳ್ಳಿ, ತುಮಕೂರು ಜಿಲ್ಲೆ
14-5-84 —ಹುಲುಕುಂಟೆ, ಬೆಂಗಳೂರು ಜಿಲ್ಲೆ
20-5-84 —ದೊಡ್ಡಹೆಜ್ಜಾಜಿ, ಬೆಂಗಳೂರು ಜಿಲ್ಲೆ
22-5-84 —ಬೈರಸಂದ್ರ, ಬೆಂಗಳೂರು ಜಿಲ್ಲೆ
25-5-84 —ಗೋಡೇಕೆರೆ, ತುಮಕೂರು ಜಿಲ್ಲೆ
27-5-84 —ಶಿವನಹಳ್ಳಿ, ಬೆಂಗಳೂರು ನಗರ,
29-5-84 —ತಿಪಟೂರು, ತುಮಕೂರು ಜಿಲ್ಲೆ.



# ಶ್ರೀ ಸಿದ್ಧಗಂಗಾ ಕ್ಷೇತ್ರದ ಸೇವಾಮುಖಗಳು

ಶ್ರೀ ಸಿದ್ಧಗಂಗಾ ಕ್ಷೇತ್ರ ಒಂದು ಐತಿಹಾಸಿಕ ಪ್ರಸಿದ್ಧ ಪುಣ್ಯ ಕ್ಷೇತ್ರ. ಇದು ಸಂತರ ತಪೋಭೂಮಿ. ನಿಸರ್ಗದ ಮಡಿಲಲ್ಲಿ ಸುಂದರ ಗಿರಿವನ ತಪ್ಪಲಲ್ಲಿ ಈ ಮಠವಿದೆ. ಶ್ರೀಗುರುಕುಲಕ್ಕೆ ಬೆಂಗಳೂರಿನಿಂದ ಅರವತ್ತೈದು ಕಿಲೋಮೀಟರುಗಳು ತುಮಕೂರಿನಿಂದ 5 ಕಿಲೋಮೀಟರುಗಳು. ಶ್ರೀಮಠದಿಂದ ತುಮಕೂರಿಗೊಂದು ಶೋಭೆ ಅಷ್ಟೇಅಲ್ಲ. ತುಮಕೂರನ್ನು ಪರಿಚಯಿಸುವಾಗ ಸಿದ್ಧಗಂಗೆಯ ಸಮೀಪದಲ್ಲಿರುವ ತುಮಕೂರೆಂಬ ಪರಿಚಯ ವ್ಯಾಪ್ತಿ ಶ್ರೀಮಠಕ್ಕಿದೆ. ಇದು ಪವಿತ್ರ ಯಾತ್ರಸ್ಥಳ; ಭಾವುಕರ ಭಕ್ತಿಯ ನೆಲವೀಡು. ಸಂಸ್ಕೃತಿಯ ತೌರು. ವಿದ್ಯಾಕೇಂದ್ರ. ಪ್ರವಾಸಿಗರ ಬೀಡು. ಆರೋಗ್ಯ ತಾಣ ಸಿದ್ಧ ಸಾಧಕರ, ಸಾಧು–ಸಂತರ ಅಭಯಾಶ್ರಮ ಆಶ್ರಿತರ ಆಶ್ರಮಧಾಮ, ಮಹಾನ್ ದಾಸೋಹ ಮಂದಿರವಾಗಿ ನಾಡಿನ ಜನಮನವನ್ನು ನಿತ್ಯವೂ ಆಕರ್ಶಿಸುತ್ತಿದೆ ಏಳೆಂಟು ಶತಮಾನಗಳಿಂದಲೂ ಮಹಿಮಾ ನಿತ್ಯ ತಪೋನಿಷ್ಠ ಸಂತವರೇಣ್ಯರು ಇಲ್ಲಿ ನೆಲಸಿ ತಪಗೈದು ಈ ಭೂಮಿಯನ್ನು ಪಾವನಗೊಳಿಸಿದ್ದಾರೆ. ಶೂನ್ಯ ಪೀಠಪರಂಪರೆಗೆ ಸೇರಿದ ಶ್ರೀ ಗೋಸಲ ಸಿದ್ಧೇಶ್ವರರು ಇಲ್ಲಿ ತಪಸ್ಸನ್ನಾಚರಿಸಿ ಶ್ರೀ ಕ್ಷೇತ್ರಕ್ಕೊಂದು ಐತಿಹಾಸಿಕ ಅಸ್ತಿತ್ವವನ್ನು ನೆಲೆಗೊಳಿಸಿದರು. ಅವರ ತಪಶಕ್ತಿಯ ಸಿದ್ಧಿಯಿಂದ ಸಿದ್ಧಿಗೊಂಡು ಧರೆಗೆದ್ದು ಬಂದ ಈ ಸಿದ್ಧಗಂಗೆ ಇಂದು ಸಿದ್ಧಗಂಗಾ ಕ್ಷೇತ್ರವೆಂದು ಮೆರೆದಿದೆ.

ಶ್ರೀ ಸಿದ್ಧಗಂಗಾ ಕ್ಷೇತ್ರದ ಈಗಿನ ಮಠಾಧಿಕಾರಿಗಳು, ವಿರಕ್ತ ಪರಂಪರೆಯಲ್ಲಿ ಬಂದ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು. ಉದ್ದಾನ ಶಿವಯೋಗೀ ಸಿದ್ಧಪುರುಷರ ಕರಕಮಲ ಸಂಜಾತರಾಗಿ 1930ನೆಯ ವರ್ಷದಲ್ಲಿ ಪೂರ್ವಾಶ್ರಮ ತ್ಯಜಿಸಿ ಸನ್ಯಾಸಾಶ್ರಮ ಸ್ವೀಕರಿಸಿದರು. ಅಂದಿನಿಂದಲೂ ಶ್ರೀ ಕ್ಷೇತ್ರದ ಅಭಿವೃದ್ಧಿಗಾಗಿ ನಿರಂತರ ದುಡಿದು ಹಣ್ಣಾದ ಪೂಣ್ಯಮೂರ್ತಿಗಳು ಶ್ರೀ ಶ್ರೀ ಗಳವರು ತಮ್ಮನ್ನು ಸಮಾಜಸೇವೆಗೆ ಅರ್ಪಿಸಿಕೊಂಡಿದ್ದಾರೆ. ಅವರ ಸಮಾಜಸೇವಾ ಅನಂತ ಮುಖಗಳ ಸ್ಥೂಲ ಪರಿಚಯ ವಿದಷ್ಟೆ.

ಸ್ವಾಮೀಜಿಯವರು ಪ್ರಥಮತಃ ಆಂಗ್ಲ ವಿದ್ವಾಂಸರಾದರೂ ಸಂಸ್ಕೃತ ಪಂಡಿತರೂ ಆಗಿ ಪ್ರಾಚೀನ ಮತ್ತು ಅರ್ವಾಚೀನ ವಿದ್ಯೆ, ಸಂಸ್ಕೃತಿಗಳ ಸಮನ್ವಯತೆಯನ್ನು ಸಾಧಿಸಿತೋರಿಸಿದರು. ತಮ್ಮೆಲ್ಲ ಸೇವಾಕಾರ್ಯಗಳಲ್ಲಿ ಭಾರತೀಯ ಭವ್ಯ ಪರಂಪರೆಗೆ

ಥಕ್ಕೆ ಬರದಂತೆ ನವೀನತೆಯನ್ನು ಸೃಷ್ಟಿಸುವಲ್ಲಿ ಯಶಸ್ವಿಯಾದರು ಶಿಕ್ಷಣ ಕ್ಷೇತ್ರದಲ್ಲಿ ಅಸಾಧಾರಣ ಕಾರ್ಯವೆಸಗಿ ಅಚ್ಚರಿಗೊಳಿಸಿದ್ದಾರೆ. ಸಾಹಿತ್ಯ, ಸಂಸ್ಕೃತಿ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಶ್ರೀ ಸ್ವಾಮೀಜಿಯವರು ಸಲ್ಲಿಸಿರುವ ವಿಶೇಷ ಸೇವೆಯನ್ನು ಗುರುತಿಸಿದ ಕರ್ನಾಟಕ ವಿಶ್ವವಿದ್ಯಾಲಯ 1965ರಲ್ಲಿ ಗೌರವ ಡಾಕ್ಟರೇಟ್ ಪದವಿಯನ್ನು ಅರ್ಪಿಸಿ ಗೌರವಿಸಿದೆ. ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಮತ್ತು ನಾಡಿನ ಭಕ್ತವೃಂದದವರು. 1972ರಲ್ಲಿ ರಜತಮಹೋತ್ಸವವನ್ನು ಮತ್ತು 1982 ರಲ್ಲಿ ಸುವರ್ಣಮಹೋತ್ಸವವನ್ನು ಶ್ರೀ ಶ್ರೀ ಗಳವರ ಘನತೆ ಗೌರವಕ್ಕನುಗುಣವಾಗಿ ಆಚರಿಸಿ ತಮ್ಮ ಕೃತಜ್ಞತೆಯನ್ನು ಸಮರ್ಪಿಸಿದರು. ಶ್ರೀ ಶ್ರೀ. ಸ್ವಾಮೀಜಿಯವರು, ಲಿಂಗಪೂಜಾ ನಿಷ್ಠರಾಗಿ ವೈರಾಗ್ಯ ಸಂಪನ್ನರಾಗಿ ಇಡೀ ಸನ್ಯಾಸೀ ಸಮುದಾಯಕ್ಕೇ ಆದರ್ಶಪ್ರಾಯರಾಗಿದ್ದಾರೆ. ದೊಡ್ಡ ತಪಸ್ವಿಯಾಗಿಯೂ ತಮ್ಮ ಸಾಮಾಜಿಕ ಸೇವಾ ಜವಾಬ್ದಾರಿಯನ್ನು ಚಿಂತಿಸಿ! ಶ್ರೀ ಮಠವನ್ನು ರಾಷ್ಟ್ರೀಯ ಸೇವಾ ಕಾರ್ಯಗಳಿಗಾಗಿ ಸಿದ್ಧಗೊಳಿಸಿದ್ದಾರೆ. ಎತ್ತರದ ಹಂತಗಳನ್ನು ಏರಿದ ಘನ ವ್ಯಕ್ತಿತ್ವ ಪೂಜ್ಯರದು. ನಮ್ಮ ಪೂರ್ವಜರು ಪೋಷಿಸಿ ಕೊಂಡು ಬಂದ ಪುರಾತನ ಸಂಸ್ಕೃತಿ ಪ್ರಿಯರು. ತಮ್ಮ ಉದಾರ ಚರಿತೆ ಮತ್ತು ನಿರ್ಮಲ ಹೃದಯಗಳಿಂದ ಇಡೀ ಮಾನವ ಕುಲ ಒಂದೇ ಎಂದರಿತ ಮಹಾವಿಶ್ವಕುಟುಂಬಿ. ಎಲ್ಲಾ ಜಾತಿ, ಮತ, ಪಂಥಗಳ ಸಂಗಮಬಿಂದು. ಸರ್ವಧರ್ಮ ಸಮನ್ವಯತೆ ಅವರ ಎಲ್ಲಾ ಚಟುವಟಿಕೆಗಳಲ್ಲಿ ಎದ್ದು ಕಾಣುವ ಒಂದು ಪ್ರಮುಖ ಅಂಶ. ಅಣ್ಣ ಬಸವಣ್ಣನವರ ತತ್ವೋಪದೇಶವನ್ನು ಜೀವನದುದ್ದಕ್ಕೂ ಆಚರಣೆಯಲ್ಲಿ ತಂದ ಶರಣವರೇಣ್ಯರು.

ಪೂಜ್ಯ ಉದ್ದಾನ ಶಿವಯೋಗಿಗಳವರು 1917ರಲ್ಲಿ ಒಂದು ಉಚಿತ ವಿದ್ಯಾರ್ಥಿ ನಿಲಯ ಮತ್ತು ಒಂದು ವೇದ ಸಂಸ್ಕೃತ ಪಾಠಶಾಲೆಯನ್ನು ಶ್ರೀ ಮಠದಲ್ಲಿ ಪ್ರಾರಂಭಿಸಿದರು. ಅಂದೇ ಎಲ್ಲ ಕೋಮಿನ ವಿದ್ಯಾರ್ಥಿಗಳಿಗೆ ಆಶ್ರಯ ವಿತ್ತರು. ಒಂದು ವಿಷಯವನ್ನಿಲ್ಲಿ ಸ್ಮರಿಸಬೇಕು. ಆ "ಸರಕಾರವೇ ಕೋಮುವಾರು ವಿದ್ಯಾರ್ಥಿ ನಿಲಯಗಳಿಗೆ ಉತ್ತೇಜನ ನೀಡುತ್ತಿದ್ದ ಕಾಲದಲ್ಲಿ ನಮ್ಮ ಗುರುಗಳು ಎಲ್ಲ ಕೋಮಿನವರಿಗೂ ಶ್ರೀ ಮಠದಲ್ಲಿ ಆಶ್ರಯ ಕೊಟ್ಟರು. ಅವರ ವಿಶ್ವ ವಿಶಾಲ ಹೃದಯ ನಮಗೆ ಸ್ಫೂರ್ತಿ" ಎನ್ನುತ್ತಾರೆ. ಶ್ರೀ ಶ್ರೀ ಸ್ವಾಮೀಜಿಯವರು. ಅಂದು ನಲವತ್ತು ಮಂದಿ ಇದ್ದ ವಿದ್ಯಾರ್ಥಿಗಳು ಇಂದು ಸುಮಾರು ನಾಲ್ಕು ಸಾವಿರಕ್ಕೆ ಸಮೀಪಿಸಿ ವಿದ್ಯಾರ್ಥಿನಿಲಯದಲ್ಲಿ ಅಭ್ಯಾಸಮಾಡುತ್ತಿದ್ದಾರೆ ದೇಶದ ನಾನಾ ಭಾಗದ ಬಡಕುಟುಂಬಗಳಿಂದ ಬಂದಿರುವ ಈ ಮಕ್ಕಳೂ ಐವತ್ತಕ್ಕೂ ಹೆಚ್ಚು ಕೋಮಿಗೆ ಸೇರಿದವರಾಗಿದ್ದಾರೆ. ಮುಂದಿನ ಪೀಳಿಗೆಯ ಭವಿಷ್ಯವನ್ನು ಹಸನಗೊಳಿಸಲು ಮತ್ತು ಜೀವನವನ್ನು ಸುಂದರ ಗೊಳಿಸಲು ಅಗತ್ಯವಾದ ಸೌಕರ್ಯವನ್ನು ಒದಗಿಸಿ ಕೊಡುವಲ್ಲಿ ಶ್ರೀ ಶ್ರೀ ಗಳವರಿಗೆ ವಿಶೇಷ ಆಸಕ್ತಿ. ಹಬ್ಬ ಮತ್ತು ಧಾರ್ಮಿಕ ವಿಧಿಗಳಲ್ಲಿ ನಡೆಯುವ ಊಟ ಉಪಚಾರಗಳು ಮತ್ತು ಸಂಪ್ರದಾಯಗಳನ್ನು ಬಿಡದೆ ನಡಸಿಕೊಂಡು ಬರುವಲ್ಲಿ ಎಂದೂ ಹಿಂದೆಗೆದಿಲ್ಲ. ಅವರ ನಿರಂತರಹುಡಿಮೆ ಮತ್ತು ಜಾಗರೂಕತೆಯ ಫಲದಿಂದಾಗಿ ಶ್ರೀ ಕ್ಷೇತ್ರಕ್ಕೆ ಸೇರಿಸಿದ ವಿದ್ಯಾರ್ಥಿಗಳ ಬಗ್ಗೆ ಪೋಷಕರು ನೆಮ್ಮದಿಯಿಂದಿರುವಂತಾಗಿದೆ ಈ ಬೃಹತ್ ವಿದ್ಯಾರ್ಥಿನಿಲಯದ ವೆಚ್ಚವನ್ನು ಪರಿದೂಗಿಸುವಷ್ಟು ಆಸ್ತಿ ಶ್ರೀ ಮಠಕ್ಕಿಲ್ಲ. ಶ್ರೀ ಗಳವರ ಭಿಕ್ಷಾಟನೆ ಮತ್ತು ನಾಡಿನ ಉದಾರ ಜನತೆಯ ಸಹಾಯವೇ ಸಂಪಾದನೆಯ ಮೂಲ. ಅನೇಕ ದಾನಿಗಳು ತಮ್ಮ ಸರ್ವಸ್ವವನ್ನು ಶ್ರೀ ಮಠಕ್ಕೆ ದಾನವಾಗಿ ಕೊಟ್ಟಿದ್ದಾರೆ. ಅವರು ಅರ್ಪಿಸಿ ಸಮಾಜ ಸೇವಾ ಕಾರ್ಯದಲ್ಲಿ ಭಾಗಿಗಳಾಗಿದ್ದಾರೆ. ಸ್ವಾಮೀಜಿಯವರ ಉತ್ತಮ ಕೆಲಸಗಳಿಗೆ ಇದೊಂದು ಭೌತಿಕ ಸಾಕ್ಷಿ.

ತ್ರಿವಿಧ ದಾಸೋಹಿಗಳೆಂದೇ ಸ್ವಾಮೀಜಿಯವರು ಜನಪ್ರಿಯರು. ಅನ್ನ ಜ್ಞಾನ; ಧರ್ಮಗಳ ದಾಸೋಹ ಇಲ್ಲಿ ನಡೆದಿದೆ. ಸ್ವಾಮೀಜಿಯವರ ಅತಿಪ್ರಿಯವಾದ ಕಾರ್ಯ ಅನ್ನ ದಾಸೋಹ. ನೂರಾರು ವರ್ಷಗಳ ಹಿಂದೆ ಇಲ್ಲಿ ಹೊತ್ತಿಸಿದ ಹೊಲೆ ಇನ್ನೂ ಆರಿಲ್ಲ. ಪ್ರತಿದಿನ ಸಹಸ್ರಾರು ಜನರಿಗೆ ಇಲ್ಲಿ ಅನ್ನಸಂತರ್ಪಣೆ ನಡೆಯುತ್ತಿದೆ. ಶಿವರಾತ್ರಿಯಲ್ಲಿ ಪ್ರತಿವರ್ಷವೂ ನಡೆಯುವ ಜಾತ್ರೆ ಕಾಲದಲ್ಲಿ ಹತ್ತು ಹದಿನೈದು ದಿನಗಳು ಲಕ್ಷಾಂತರ ಜನಕ್ಕೆ ದಾಸೋಹದ ವ್ಯವಸ್ಥೆ. ಸ್ವಾಮೀಜಿಯವರು ಈ ಲೋಕೋಪಕಾರಕ ಕಾರ್ಯರೂಪವನ್ನು ಕಂಡ ಜನತೆ ಉದಾರವಾಗಿ ಕೊಡುತ್ತಾರೆ. ಅದನ್ನು ಅವರಿಗಾಗಿಯೇ ವಿನಿಯೋಗಿಸುತ್ತಾರೆ. ಶರಣ ತತ್ವ ಇಲ್ಲಿ ಕಾರ್ಯರೂಪಕ್ಕಿಳಿದಿದೆ. ಶ್ರೀ ಕ್ಷೇತ್ರಕ್ಕೆ ಬಂದವರೆಲ್ಲರೂ ಪ್ರಸಾದ ಸ್ವೀಕರಿಸಬೇಕೆಂದು ಶ್ರೀ ಗಳವರ ಉತ್ಕಟೇಚ್ಛೆ. ದರ್ಶನಕ್ಕೆ ಬಂದವರನ್ನು ಶ್ರೀ ಗಳು ಕೇಳುವ ಮೊದಲ ಪ್ರಶ್ನೆ ಪ್ರಸಾದವಾಯಿತೇ? ಎಂದು ಒಟ್ಟನಲ್ಲಿ ವಿತರಣ ವ್ಯವಸ್ಥೆಯದ್ವಾರ ಮುಕ್ತದ್ವಾರ. ರೈತಬಂಧುಗಳು ರಾತ್ರಿ 12–1ಘಂಟೆಗಳಲ್ಲಿ ಪ್ರಸಾದ ಸ್ವೀಕರಿಸಿ ಬೆಂಗಳೂರಿಗೆ ಪ್ರಯಾಣ ಬೆಳೆಸುವಲ್ಲಿ ಹೇಳಿದಮಾತು "ಪ್ರಸಾದವಿಲ್ಲದೆ ನೂರಾರೂ ಮೈಲಿ ಬಂದೆವು, ಪುಣ್ಯಾತ್ಮರು ಹೊಟ್ಟೆತುಂಬ ಪ್ರಸಾದನೀಡಿದರು" ಎಂದು.

ಸ್ವಾಮೀಜಿಯವರು 1937ರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಕಾಲೇಜನ್ನಾಗಿ ಪರಿವರ್ತಿಸಿದರು. ಎರಡು ಸಾವಿರದ ಐದುನೂರಕ್ಕೂ ಹೆಚ್ಚು ಮಂದಿ ವ್ಯಾಸಂಗ ಮಾಡುತ್ತಿರುವ ಈ ಕಾಲೇಜು ದೇಶದಲ್ಲೇ ಪ್ರಥಮ ಎಂದೆನಿಸಿದರು. ಈ ಸಂಸ್ಥೆಯಲ್ಲಿ ಹರಿಜನ–ಗಿರಿಜನರಿಗೆ ಸಂಸ್ಕೃತಾಭ್ಯಾಸಮಾಡುವ ಪ್ರಥಮತಃ ಅವಕಾಶ ಕಲ್ಪಿಸಿಕೊಟ್ಟ

ಕೀರ್ತಿ ಸ್ವಾಮೀಜಿಯವರದು. ಸಂಸ್ಕೃತ ಕಾಲೇಜಿನಲ್ಲಿ ಸಹಸ್ರಾರೂ ಮಂದಿ ಅಭ್ಯಾಸ ಮಾಡಿ ನಾಡಿನ ಮೂಲೆಮೂಲೆಗಳಲ್ಲಿ ಸಂಸ್ಕೃತ ಪ್ರಚಾರ ಕಾರ್ಯದಲ್ಲಿ ತೊಡಗುವಂತೆಮಾಡಿದರು. ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣ ವಯಸ್ಸಿನ ಮಕ್ಕಳಿಗೆ ಸಂಸ್ಕೃತಾಭ್ಯಾಸ ಸೌಕರ್ಯವನ್ನು ಕಲ್ಪಿಸುವುದಕ್ಕಾಗಿ ಹತ್ತಾರು ಸಂಸ್ಕೃತ ಪಾಠಶಾಲೆಗಳನ್ನು ತೆರೆದಿದ್ದಾರೆ. ಮಹಾಪಾಠಶಾಲೆಯಲ್ಲಿ ಅಲಂಕಾರ, ತರ್ಕ, ವ್ಯಾಕರಣ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಬೋಧನೆನಡೆಯುತ್ತದೆ; ಪ್ರತಿವರ್ಷವೂ ವಿದ್ವತ್ ಪರೀಕ್ಷೆಗೆ ಬಹಳ ಮಂದಿ ಕುಳಿತು ಕೊಂಡು ತೇರ್ಗಡೆ ಯಾಗುತ್ತಿದ್ದಾರೆ. ಶ್ರೀ ಉದ್ದಾನಶಿವಯೋಗಿಗಳ ಸದುದ್ದೇಶದಿಂದ ಆರಂಭಗೊಂಡ ಸಂಸ್ಕೃತ ಪಾಠಶಾಲೆ ಮತ್ತು ಉಚಿತ ವಿದ್ಯಾರ್ಥಿನಿಲಯಗಳೆರಡಕ್ಕೂ 82ನೆಯ ಏಪ್ರಿಲ್ ತಿಂಗಳಲ್ಲಿ ವಜ್ರ ಮಹೋತ್ಸವವನ್ನು ಆಚರಿಸಲಾಯಿತು. ಖಾಸಗೀ ಸಂಸ್ಥೆಗಳ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು.

ಶ್ರೀ ಸ್ವಾಮೀಜಿಯವರು ಸರ್ವಧರ್ಮ ಸಮನ್ವಯ ಸಾಧಿಸುವಲ್ಲಿ ಯಶಸ್ವಿಗಳಾಗಿದ್ದಾರೆ ಧರ್ಮದ ಅಡಿಗಲ್ಲಿನ ಮೇಲೆ ಸಮಾಜ ನಿರ್ಮಾಣಮಾಡಬೇಕೆನ್ನುತ್ತಾರೆ ಪೂಜ್ಯರು. ಧಾರ್ಮಿಕ ಮುಖಂಡರಾಗಿ, ಜೀವನದ ಪರಮ ಗುರಿಯನ್ನು ಸಾಧಿಸುವ ಸಲುವಾಗಿ ಸಾಮೂಹಿಕ ಪ್ರಾರ್ಥನೆಯನ್ನು ನಡಸಿಕೊಂಡು ಬಂದಿದ್ದಾರೆ. ಪ್ರತಿದಿನ ಸಂಜೆ ಎಲ್ಲ ವಿದ್ಯಾರ್ಥಿಗಳು ಸಮವಸ್ತ್ರವನ್ನು ಧರಿಸಿ ಪ್ರಾರ್ಥನೆಗೆ ಬರುವ ದೃಶ್ಯವಂತೂ ನಯನ ಮನೋಹರ. ಭಕ್ತಿರಸವತ್ತಾದ ಘಳಿಗೆ. ಉಪನಿಷತ್, ಗೀತೆ, 'ದಾಸರ' ಶರಣರ, ಕೀರ್ತನೆಗಳನ್ನು ಭಜಿಸುತ್ತಾರೆ. ಕೊನೆಯಲ್ಲಿ ಶ್ರೀ ಶ್ರೀ ಸ್ವಾಮೀಜಿಯವರು ಧರ್ಮ ಪ್ರವಚನ ಮಾಡುತ್ತಾರೆ. ರೋಗ ರುಜಿನಗಳಿಗೆ ತುತ್ತಾದವರು, ಕಷ್ಟಗಳಿಗೆ ಸಿಲುಕಿದವರು, ಮಾನಸಿಕ ದೌರ್ಬಲ್ಯಕ್ಕೆ ಒಳಗಾದವರು, ಉಪದೇಶ ಮತ್ತು ದರ್ಶನಾಶೀರ್ವಾದವನ್ನು ಪಡೆದು ಪುನೀತರಾಗುತ್ತಾರೆ. ಯಂತ್ರಧಾರಣೆಯನ್ನು ಮಾಡಿಸಿಕೊಂಡು ತಮ್ಮ ಕಷ್ಟಗಳನ್ನೆಲ್ಲಾ ಪರಿಹರಿಸಿಕೊಳ್ಳುತ್ತಾರೆ. ಅವರ ಬೇಡಿಕೆಗಳನ್ನು ಶಾಂತ ಚಿತ್ತದಿಂದ ಆಲಿಸಿ ಅವರಿಗೆ ಪರಿಹಾರಮಾರ್ಗವನ್ನು ಸೂಚಿಸುತ್ತಾರೆ. ಎಲ್ಲ ಧರ್ಮೀಯರೂ ಶ್ರೀಗಳವರನ್ನು ಸಭೆಸಮಾರಂಭಗಳಿಗೆ ಆಹ್ವಾನಿಸುತ್ತಾರೆ. ಸ್ವಾಮೀಜಿಯವರ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ನೈತಿಕವಾದ ಉಪದೇಶವನ್ನು ಕೇಳಿ ಸ್ಫೂರ್ತಿಗೊಂಡವರು ಅದೆಷ್ಟೋ ಮಂದಿ ಇದ್ದಾರೆ. ಹಲವು ವಿಧವಾದ ಸಂಸ್ಥೆಗಳು ಸಮಿತಿಗಳ ಗೌರವಾಧ್ಯಕ್ಷರಾಗಿ, ಸದಸ್ಯರಾಗಿ, ಹಲವಾರು ವರ್ಷಗಳು ತಮ್ಮ ಅಪೂರ್ವ ಸಲಹೆ ಸ್ಫೂರ್ತಿಯನ್ನು ನೀಡಿದ ಹಲವಾರು ನಿದರ್ಶನಗಳುಂಟು. ಹೀಗಾಗಿ ಎಲ್ಲ ವಿಧಸಂಸ್ಥೆಗಳಲ್ಲಿ ಭಾಗವಹಿಸಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ರಾಷ್ಟ್ರೀಯ ಸೇವೆಯಲ್ಲಿ ಭಾಗಿಗಳಾಗುತ್ತಾರೆ. ಪ್ರತಿನಿತ್ಯ



ಸು. 18- 20 ಘಂಟೆಗಳ ಕಾಲ ಸಮಾಜಚಿಂತನೆಯಲ್ಲಿ ತೊಡಗುತ್ತಾರೆ. ನಿರಂತರ ಹಾಗೂ ಕಷ್ಟಕರ ಕಾಯಕ ಅವರ ದೈವೀಜೀವನದ ಅಡಿಗಲ್ಲು. ಹೀಗಿದ್ದರೂ ಸ್ವಂತದ ವಿಚಾರಗಳಿಗಾಗಿ ಒಂದರಗಳಿಗೆಯೂ ಚಿಂತಿಸರು. ಅವರ ಎಲ್ಲ ಚಟುವಟಿಕೆಯ ಸೇವಾಮುಖಗಳು ಮಾನವ ಕುಲದ ಏಳಿಗೆಗಾಗಿಯೇ ಮೀಸಲು. ಈ ಅವಿಶ್ರಾಂತ ದುಡಿಮೆಯನಡುವೇ ಅವರ ಜೀವನ.

ದೇಶದ ಅಭಿವೃದ್ಧಿಗೆ ತಾಂತ್ರಿಕ ಜ್ಞಾನ ಅತಿಮುಖ್ಯವೆಂದರಿತ ಸ್ವಾಮೀಜಿಯವರು ತುಮಕೂರಿನ ಹೊರವಲಯದಲ್ಲಿ ಇಂಜಿನಿಯರ್ ಕಾಲೇಜೊಂದನ್ನು 1963 ರಲ್ಲಿ ಸ್ಥಾಪಿಸಿದರು. ಈ ಶಿಕ್ಷಣಸಂಸ್ಥೆಯು ಬೃಹದಾಕಾರವಾಗಿ ಬೆಳೆದಿದೆ ದೇಶದ ನಾನಾಭಾಗಗಳಿಂದ ಮತ್ತು ಹೊರ ದೇಶಗಳಿಂದ ಬಂದ ಸು. ಎರಡು ಸಾವಿರ ವಿದ್ಯಾರ್ಥಿಗಳು ಇಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಕಾಲೇಜಿನಲ್ಲಿ ಎಂಟು ವಿಭಾಗಗಳಿವೆ ಸುಸಜ್ಜಿತ ಪ್ರಯೋಗಾಲಯಗಳಿವೆ. ಸುವ್ಯವಸ್ಥಿತ ವಿದ್ಯಾರ್ಥಿನಿಲಯಗಳೂ, ಬೋಧನ ಕೊಠಡಿಗಳಿಂದ ಕೂಡಿ ಇಡೀ ತುಮಕೂರು ನಗರಕ್ಕೆ ಭವ್ಯವಾಗಿದೆ. S. I. T. ಎಂದೇ ಪ್ರಸಿದ್ಧವಾಗಿರುವ ಈ ಸಂಸ್ಥೆಯಿಂದಾಗಿ ತುಮಕೂರು ನಗರಕ್ಕೆ ಭವಿಷ್ಯದ ತಿರುವನ್ನು ಕೊಟ್ಟಿತು. ತನ್ನ ಆದರ್ಶ ಸೇವೆಯಿಂದ ನಾಡಿನಲ್ಲಿ ಒಂದು ವಿಶೇಷ ಸ್ಥಾನವನ್ನು ಗಳಿಸಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಪ್ರಾಥಮಿಕ ಪೂರ್ವ ಶಿಕ್ಷಣದಿಂದ ಆರಂಭವಾಗಿ ಪದವಿಯೋತ್ತರ ಶಿಕ್ಷಣ ಹಂತದ ನೂರಾರು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ನಾಡಿನ ಸೇವೆಸಲ್ಲಿಸಲು ಸ್ವಾಮೀಜಿಯವರು ಅವಕಾಶಮಾಡಿಕೊಟ್ಟಿದ್ದಾರೆ. ಬಹುಮಟ್ಟಿಗೆ ಈ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿವೆ. ಗ್ರಾಮಿಣ ಬಂಧುಗಳ ಜೀವನವನ್ನು ಹಸನುಗೊಳಿಸಲು ಕೈಗೊಂಡ ಕಾರ್ಯಗಳಲ್ಲಿ ಇದೂ ಒಂದು. ನರ್ಸರಿ ಶಾಲೆಗಳು, ಪ್ರಾಥಮಿಕ ಶಾಲೆಗಳು, ಪ್ರೌಢಶಾಲೆಗಳು, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜುಗಳು, ಸಂಜೇ ಕಾಲೇಜ್, ಅಂಧಮಕ್ಕಳಶಾಲೆ ಹೀಗೆ ವಿವಿಧ ಹಂತಗಳಲ್ಲಿ ಈ ಸಂಸ್ಥೆಗಳು ಸೇವೆಸಲ್ಲಿಸುತ್ತಿವೆ. ಶಿಕ್ಷಣಕ್ಷೇತ್ರದಲ್ಲಿ ತಮ್ಮ ನಿಷ್ಠೆಯ ಸೇವೆಗಾಗಿ ಹೆಸರಾಗಿರುವ ಈ ಸಂಸ್ಥೆಗಳು ಉಳಿದ ಶಾಲಾ ಕಾಲೇಜುಗಳಿಗೆ ಮಾದರಿಯಾಗಿವೆ. ಉತ್ತಮಸೇವೆಯಿಂದ ಸಾರ್ವಜನಿಕರ ಮನ್ನಣೆಯನ್ನು ಪಡೆದಿದೆ.

ಸ್ವಾಮೀಜಿಯವರ ಚಿಂತನವ್ಯಾಪ್ತಿ ವಿಶಾಲವಾದುದು. ಅದರ ಪರಿಣಾಮವಾಗಿ ವೃತ್ತಿಮೂಲ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿದ್ದಾರೆ. ಉದ್ಯೋಗ ವ್ಯಕ್ತಿಯ ಬಾಳಿಗೆ ಆಸರೆ ಎಂದು ತಿಳಿದೇ ಹಲವು ರೀತಿಯ ವೃತ್ತಿಪರ ಶಿಕ್ಷಣ ಕೇಂದ್ರಗಳನ್ನು

ಸ್ಥಾಪಿಸಿದರು. ಎರಡು ಪ್ರಾಥಮಿಕ ಶಿಕ್ಷಕರ ತರಬೇತಿ ಸಂಸ್ಥೆಗಳು ಒಂದು ಬಿ. ಇಡಿ. ಕಾಲೇಜ್ ಸ್ಥಾಪಿಸಿದ್ದಾರೆ. ಒಂದು ಕನ್ನಡ ಪಂಡಿತ ತರಬೇತಿ ಸಂಸ್ಥೆ ಮೈಸೂರಿನಲ್ಲಿರುವ ಸರ್ಕಾರಿ ತರಬೇತಿ ಸಂಸ್ಥೆಯನ್ನು ಬಿಟ್ಟರೆ ರಾಜ್ಯದಲ್ಲೇ ಇದು ಎರಡನೆಯ ಕಾಲೇಜ್. ಗ್ರಾಮಾಂತರ ಪ್ರದೇಶಗಳಲ್ಲಿಯೂ ವೃತ್ತಿಮೂಲ ಕಿರಿಯ ಕಾಲೇಜ್ ಮತ್ತು ಸಂಸ್ಥೆಗಳನ್ನು ತೆರೆಯುವ ಯೋಜನೆಯೂ ಇದೆ.

ಪ್ರತಿವರ್ಷವೂ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆಯು ನಡೆಯುತ್ತದೆ. ದನಗಳ ಜಾತ್ರೆಯೂ ನಡೆಯುತ್ತದೆ. ಉತ್ತಮರಾಸುಗಳಿಗೆ ಬಹುಮಾನ ವಿತರಣೆಯು ನಡೆಯುವಂತೆ ಏರ್ಪಾಟುಮಾಡಿದ್ದಾರೆ. ಮತ್ತು ಆಕಸ್ಮಿಕ ಸತ್ತರಾಸುಗಳಿಗೆ ಪರಿಹಾರವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದ್ದಾರೆ. ಪೂಜ್ಯಉದ್ದಾನ ಶಿವಯೋಗಿಗಳವರಿಂದ ಆರಂಭಗೊಂಡ ಜಾತ್ರೆಯಲ್ಲಿ 1909 ರಿಂದಲೂ ದಾಸೋಹ ಮತ್ತು ಸ್ವಾಮಿಯ ಉತ್ಸವಾದಿಗಳನ್ನು ಎಡೆಬಿಡದೆ ನಡಸಿಕೊಂಡು ಬರಲಾಗುತ್ತದೆ. ಎಂತಹ ಎಡರು ತೊಡರು ಬಂದರೂ ಜಾತ್ರೆಯಕಾರ್ಯವನ್ನು ನಿಲ್ಲಸಲಾಗಿಲ್ಲ. ಮುತ್ತಿನ ಪಾಲಿಕೆ, ಬೆಳ್ಳಿಪಾಲಿಕೆ ಮತ್ತು ತೆಪ್ಪೋತ್ಸವಗಳು ನೋಡಲೇ ಬೇಕಾದಂತಹ ಉತ್ಸವಗಳು, ಬೆಳ್ಳಿಯ ಪಾಲಿಕಿಯಂದು ನಡೆಯುವ ವಿಶೇಷವಾದ ಮದ್ದಿನ ವ್ಯವಸ್ಥೆಯೊಂದು ಇಡೀ ಜಾತ್ರೆ ಉತ್ಸವಗಳಲ್ಲಿಯೇ ವಿಶೇಷ ಆಕರ್ಷಣೆ. ಅಂದು ಲಕ್ಷಾಂತರ ಜನ ಜಾತ್ರೆಯಲ್ಲಿ ಬಂದು ಸೇರುತ್ತಾರೆ.

ಜಾತ್ರೆ ಅಂಗವಾಗಿ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪದರ್ಶನವನ್ನು ಏರ್ಪಾಟುಮಾಡುತ್ತಾರೆ. ಈ ವಸ್ತು ಪ್ರದರ್ಶನ ರಾಜ್ಯದಲ್ಲಿಯೇ ಏಕೈಕ. ಇದರಲ್ಲಿ ರಾಜ್ಯ ಮತ್ತು ಕೇಂದ್ರ ಸರಕಾರಿ ಇಲಾಖೆಗಳು ಕೈಗಾರಿಕೆಗಳು ಖಾಸಗಿಸಂಸ್ಥೆಗಳು ವ್ಯಾಪಾರಿ ಉದ್ಯಮಗಳು, ಮತ್ತು ಬ್ಯಾಂಕಿನ ಸಂಸ್ಥೆಗಳು, ಪ್ರದರ್ಶನದಲ್ಲಿ ಭಾಗವಹಿಸುತ್ತವೆ. ಮನರಂಜನಾ ಕಾರ್ಯಕ್ರಮಗಳು, ನೃತ್ಯ ನಾಟಕಗಳು ನಡೆಯುತ್ತವೆ. ವರ್ಷಂಪ್ರತಿ ಉತ್ತಮ ಮಳಿಗೆಗಳಿಗೆ ಪಾರಿತೋಷಕ ಮತ್ತು ಬಹುಮಾನಗಳನ್ನು ಕೊಡಲಾಗುತ್ತದೆ. ಉತ್ತಮ ರೀತಿಯಲ್ಲಿ ವ್ಯವಸ್ಥೆಮಾಡುವ ಇಲಾಖೆಯವರು ಅತ್ಯಂತ ಉತ್ಸಾಹ ಮತ್ತು ಶ್ರದ್ಧೆಗಳಿಂದ ಸ್ಪರ್ಧಾತ್ಮಕವಾಗಿ ವ್ಯವಸ್ಥೆಮಾಡುತ್ತಾರೆ. ಗ್ರಾಮೀಣ ಬಂಧುಗಳ ಜ್ಞಾನಾಭಿವೃದ್ಧಿಯೇ ಪ್ರದರ್ಶನದ ಮುಖ್ಯ ಗುರಿಯಾಗುತ್ತದೆ.

ಸ್ವಾಮೀಜಿಯವರ ಮಹಾಪೋಷಕತ್ವದಲ್ಲಿ ಹಳೆಯ ವಿದ್ಯಾರ್ಥಿಮಿತ್ರರು ಸಂಘವನ್ನು ಸ್ಥಾಪಿಸಿಕೊಂಡು ವ್ಯವಸ್ಥಿತವಾಗಿ ಕಾರ್ಯನಿರ್ವಹಣೆಯನ್ನು ಮಾಡುತ್ತಾ ಬಂದಿದ್ದಾರೆ. ಈ ಸಂಘದ ಆಶ್ರಯದಲ್ಲಿ ಅನೇಕ ಚಟುವಟಿಕೆಗಳು ನಡಯುತ್ತಿವೆ.

[60 ನೇ ಪುಟ ನೋಡಿ



# ಜಾತ್ಯತೀತ ಸಮಾಜನಿರ್ಮಾಣದ ಪ್ರತಿಜ್ಞೆ ಸ್ವೀಕರಿಸಿರಿ.

— ಮೂಜಗಂ

**ಶ್ರೀ ಮನ್ಮಹಾರಾಜ ನಿ| ಜ| ಗಂಗಾಧರರಾಜಯೋಗೀಂದ್ರ ಮಹಾಸ್ವಾಮಿಗಳು ತಾ|| 22-4-84 ರಂದು ೫ ನೆಯ ಅಖಿಲ ಕರ್ನಾಟಕ ಬ್ರಾಹ್ಮಣ ಸಮ್ಮೇಲನ ಹುಬ್ಬಳ್ಳಿಯಲ್ಲಿ ಸೇರಿದಾಗ ಅಧ್ಯಕ್ಷ ಸ್ಥಾನದಿಂದ ಅಪ್ಪಣೆ ಕೊಡಿಸಿದ ಭಾಷಣ.**

ಜಾತಿ ಮತ್ತು ಧರ್ಮಗಳಿಗೆ ಕೆಟ್ಟ ಹೆಸರನ್ನು ಅಂಟಿಸುವ ಪ್ರಯತ್ನಗಳೇ ಸುತ್ತೂಕಡೆಯಿಂದ ನಡೆಯತ್ತಿರುವಾಗ ಹುಬ್ಬಳ್ಳಿಯಲ್ಲಿ ಸೇರಿರುವ ಅಖಿಲ ಕರ್ನಾಟಕ ಬ್ರಾಹ್ಮಣರ ೫ ನೇ ಸಮ್ಮೇಳನವು ವಿವಿಧ ಜಾತಿಗಳಲ್ಲಿ ಭಾವೈಕ್ಯವನ್ನು ಉಂಟುಮಾಡುವ ಉದ್ದೇಶದಿಂದ ಒಂದು ಗೋಷ್ಠಿಯನ್ನು ಸಂಘಟಿಸಿರುವುದು ಸ್ತುತ್ಯ. ಹಾಗೆಯೇ ಇದು ದಿಟ್ಟ ಹೆಜ್ಜೆಯೂ ಹೌದು. ವೀರಶೈವ ಪೀಠವೊಂದರ ಜಗದ್ಗುರುಗಳಾದ ನಮ್ಮನ್ನು ಬ್ರಾಹ್ಮಣ ಸಮ್ಮೇಳನಕ್ಕೆ ಗೋಷ್ಠಿಯೊಂದರ ಅಧ್ಯಕ್ಷತೆ ವಹಿಸಲು ಆಮಂತ್ರಿಸಿರುವುದನ್ನು ನೋಡಿದರೆ ಸಹಜವಾಗಿಯೇ ಇಧು ಜಾತ್ಯತೀತ ಭಾವನೆಯ ಉಗಮವೆಂದು ಭಾವಿಸಬೇಕಾಗುತ್ತದೆ. ಆದ್ದರಿಂದ ಈ ಕ್ರಮವನ್ನು ನಾವು ಸ್ವಾಗತಿಸುತ್ತೇವೆ. ಸರ್ವಧರ್ಮ ಸಮ್ಮೇಳನಗಳು ಸೇರುವುದು ಇತ್ತೀಚಗೆ ಸಾಮಾನ್ಯವಾಗಿದೆ. ಆದರೆ ವಿವಿಧ ಜಾತಿಗಳ ಸಂಘಟನೆಯವರು ಮತ್ತು ಪ್ರತಿನಿಧಿಗಳು ಒಂದೇ ವೇದಿಕೆಯ ಮೇಲೆ ಬರುತ್ತಿರುವುದು ಇದೇ ಮೊದಲೆಂದು ನಮಗೆನಿಸುತ್ತದೆ.

ಜಾತಿಯ ಸಂಘಟನೆ ಎಂದೊಡನೆಯೇ ಮೂಗು ಮುರಿಯುವ ಮಹನೀಯರು ಅನೇಕರು ಇರುತ್ತಾರೆ. ಆದರೆ ಅವರ ಈ ಮಾತು ಅಥವಾ ವರ್ತನೆ ಕೇವಲ ತೋರಿಕೆಯದು, ಅವರ ನಂಬುಗೆಗಳ ಆಳವನ್ನು ಕೆಣಕಿದರೆಬೇರೆ ವಿಚಾರಗಳೇ ಇರುವುದು ಕಂಡುಬರುತ್ತದೆ. ಧರ್ಮದಂತ ಜಾತಿಯನ್ನೂ ನಮ್ಮ ನೆಮ್ಮದಿಯಬಾಳಿಗೆ ಸೋಪಾನವನ್ನಾಗಿಸಿಕೊಳ್ಳಬಹುದು. ಕೆಲವರು ಅದನ್ನು ಸ್ವಾರ್ಥಕ್ಕೆ ಬಳಸಿಕೊಂಡು ಅದಕ್ಕೆ ಕೆಟ್ಟ ಹೆಸರು ತಂದಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಧರ್ಮ ಮತ್ತು ಜಾತಿಗಳು ಮಹತ್ವದ ಪಾತ್ರ ವಹಿಸಿವೆ. ಒಂದು ವೈಯಕ್ತಿಕ ಜೀವನಕ್ಕೆ, ಮಾರ್ಗದರ್ಶಿಯಾಗಿದ್ದರೆ ಇನ್ನೊಂದು

ಸಾಮಾಜಿಕ ಜೀವನದ ಶಿಸ್ತಿನ ಸಂಹಿತೆಯಾಗಿದೆ. ಯಾವನೇ ಒಬ್ಬ ಭಾರತೀಯನನ್ನು ವಿಶ್ಲೇಶಿಸಿದರೂ ಅವನ ಆಚಾರವಿಚಾರಗಳಲ್ಲಿ ಈ ಧರ್ಮ ಮತ್ತು ಜಾತಿಗಳ ಪ್ರಭಾವ ಸಾಕಷ್ಟಿರುವುದನ್ನು ಗುರುತಿಸಬಹುದು. ಧರ್ಮ ಎಂಬ ಮೂಲ ಕಲ್ಪನೆ ಯಾರಿಂದ ಪ್ರಾರಂಭವಾಯಿತು ? ಯಾವ ಜಾತಿಯನ್ನು ಯಾರು ಪ್ರಾರಂಭಿಸಿದರು ? ಎಂಬ ವಿಚಾರಗಳು ಈಗ ಅವಶ್ಯವಿಲ್ಲ. ಯಾಕೆಂದರೆ ನಮ್ಮಲ್ಲಿ ಅನೇಕ ಧರ್ಮಗಳಿವೆ, ವಿವಿಧ ಜಾತಿಗಳಿವೆ, ಎಂಬುದು ಈಗ ನಮಗೆ ಮಹತ್ವದ್ದಾಗಿದೆ. ರೂಢಿಯಲ್ಲಿರುವ ವಿವಿಧ ಧರ್ಮಗಳಲ್ಲಿ ಅನೇಕ ಲೋಪದೋಷಗಳನ್ನು ಗುರುತಿಸಿ ಅವುಗಳು ಇಲ್ಲದಂಥ ಹೊಸ ಏಕೈಕ ಧರ್ಮವನ್ನು ಸ್ಥಾಪಿಸಬೇಕೆಂಬ ಅನೇಕ ಪ್ರಯತ್ನಗಳು ವಿವಿಧ ಮತಸ್ಥಾಪಕರಿಂದ ನಡೆದವು. ಆದರೆ ಊರ್ಜಿತದಲ್ಲಿರುವ ಧರ್ಮಗಳ ಸಂಖ್ಯೆಯೇ ಅದೂ ಒಂದು ಧರ್ಮ ಅಥವಾ ಮತ ಹೆಚ್ಚಿನದಾಗಿ ಸೇರಿತೇ ಹೊರತು ಹಿಂದಿನ ಯಾವ ಧರ್ಮ ಅಥವಾ ಜಾತಿಯೂ ಇಲ್ಲದಂತಾಗಲಿಲ್ಲ. ಇದು ಧರ್ಮಕ್ಕೆ ಅನೇಕ ಮುಖಗಳಿವೆ ಎಂಬುದನ್ನು ತೋರಿಸುತ್ತದೆ. ಆದರೆ ಈ ಎಲ್ಲ ಧರ್ಮಗಳಿಗೂ ಮೂಲವಾದ ಮಾನವ ಧರ್ಮ ಎಂಬುದೊಂದು ಇದೆ ಎಂಬುದನ್ನು ನಾವು ಗುರುತಿಸಿ ಎಲ್ಲರೂ ಅದನ್ನು ಬಲಪಡಿಸಲು ಯತ್ನಿಸಿದರೆ ಧರ್ಮಧರ್ಮಗಳಲ್ಲಿಯ ಘರ್ಷಣೆ ಬಹಳಷ್ಟು ಕಡಿಮೆಯಾದೀತು.

ಜಾತಿ ಜಾಡು ಹೆಚ್ಚಾಗಿ ಧರ್ಮವನ್ನೇ ಅನುಸರಿಸುತ್ತಾ ಬಂದಿದೆ. ಧರ್ಮದಂತೆ ಜಾತಿಯೂ ಬಹುಮಟ್ಟಿಗೆ ಭ್ರಷ್ಟಗೊಂಡಿದೆ. ಇವೆರಡೂ ಶಬ್ದಗಳ ಮೂಲ ಕಲ್ಪನೆಯನ್ನು ಸಾಕಷ್ಟು ಕುಲಗೆಡಿಸಿದ್ದಾಗಿದೆ. ಅದರಿಂದಾಗಿಯೇ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಅನೇಕ ಕಷ್ಟ ಮತ್ತು ಕ್ಲಿಷ್ಟತೆಗಳು ಅನುಭವಕ್ಕೆ ಬರುತ್ತಿವೆ. ಜಾತಿ ಮತ್ತು ಧರ್ಮಗಳನ್ನು ನಮ್ಮ ಪೂರ್ವಜರು ಜನ್ಮಕ್ಕೆ ಎಂದೂ ಅಂಟಿಸಲಿಲ್ಲ. ಧರ್ಮವನ್ನು ವೈಯಕ್ತಿಕ ಆಯ್ಕೆಗೆ ಬಿಟ್ಟರೆ ಜಾತಿಯನ್ನು ಗುಣ ಕರ್ಮಗಳ ಆಯ್ಕೆಗೆ ಬಿಟ್ಟರು. ಆದರೆ ನಾವೀಗ ಈ ಮೂಲ ತತ್ವವನ್ನೇ ಮರೆತಿದ್ದೇವೆ. ನಾವು ಜನ್ಮತಃ ಪಡೆದ ಅಂದರೆ ತಾಯ್ತಂದೆಗಳ ಹಾಗೂ ಪರಿಸರದವರ ಧರ್ಮ ಮತ್ತು ಜಾತಿಗಳು ನಮ್ಮ ಮೇಲೆ ಉಂಟುಮಾಡುವ ಸಂಸ್ಕಾರಗಳು ಆಳವಾದವುಗಳಾಗಿರುತ್ತವೆ. ಅವು ನಮಗೆ ಮುಂದೆ ನಮ್ಮದೇ ಆದ ಧರ್ಮ ಮತ್ತು ಜಾತಿಗಳ ಆಯ್ಕೆಯ ಪ್ರಶ್ನೆ ಬಂದಾಗ ಪ್ರಬಲ ಕಾರಣಗಳಾಗಿ ಅಥವ ಶಕ್ತಿಗಳಾಗಿ ಪರಿಣಮಿಸಬಹುದು. ಸಾಮಾನ್ಯ ಜನರಿಗೆ ಈ ಕಟ್ಟನ್ನು ಕಿತ್ತೊಗೆಯುವುದು ಅಸಾಧ್ಯವೂ ಆಗಬಹುದು. ಆದರೆ ಸರ್ವರಿಗೂ ಸದಾಕಾಲಕ್ಕೂ 'ಇವೇ ನಿರ್ಣಾಯಕ ಅಂಶಗಳೆಂದು ತೀರ್ಮಾನಿಸಬಾರದು. ಈ ಅಪರಾಧ ನಮ್ಮಿಂದ ಎಂದು ಘಟಿಸಿತೋ ಅಂದಿನಿಂದಲೇ ಧರ್ಮ ಮತ್ತು ಜಾತಿಗಳ ಹೆಸರಿನಲ್ಲಿ ಅನೇಕ ಅನ್ಯಾಯ ಮತ್ತು

ಅನಾಹುತಗಳು ಉಂಟಾಗಲು ಮಹಾದ್ವಾರವನ್ನೇ ತೆರೆದಂತಾಯಿತು. ಅದರಿಂದ ನುಗ್ಗಿ ಬಂದ ಅನೇಕ ಅನಿಷ್ಟಗಳು ನಮ್ಮ ಧರ್ಮದ ಕಲ್ಪನೆಯನ್ನೂ ಜಾತಿಯ ಸ್ವರೂಪವನ್ನೂ ಸಾಕಷ್ಟು ಕಲುಷಿತಗೊಳಿಸಿವೆ. ಜಗಳ ತಂಟೆಗಳಿಗೆ ಕಾರಣಗಳಾಗಿವೆ. ಜಾತಿ ಧರ್ಮಗಳಹೆಸರಿನಲ್ಲಿ ತಲೆ ಕೊಟ್ಟದ್ದೇವೆ, ತಲೆ ಕೆಡವಿದ್ದೇವೆ; ಆದರೆ ಯಾರ ತಲೆಯಲ್ಲೂ ಧರ್ಮ ಮತ್ತು ಜಾತಿಗಳ ಬಗ್ಗೆ ಶುದ್ಧ ಚಿತ್ರ ಮೂಡುವುದು ಮಾತ್ರ ಸಾಧ್ಯವಾಗಲಿಲ್ಲ.

ನಮ್ಮ ದೇಶದಲ್ಲಿ ಹುಟ್ಟಿದ ಅನೇಕ ಮತ ಮತ್ತು ಧರ್ಮ ಸ್ಥಾಪಕರು ಹಾಗೂ ಸಮಾಜ ಸುಧಾರಕರೂ ಧರ್ಮದ ಡಾಂಭಿಕತೆಯನ್ನು ಖಂಡಿಸಿದ್ದಾರೆ. ಜಾತಿ ಕುಲಗಳ ಸಂಕುಚಿತತೆಯನ್ನು ತೆಗಳಿದ್ದಾರೆ ಹಾಗೆ ಮಾಡುವಾಗ ಇವುಗಳ ಶುದ್ಧ ಸ್ವರೂಪದ ಬಗ್ಗೆ ಜನರ ಲಕ್ಷ ಸೆಳೆಯುವುದೇ ಅವರ ಉದ್ದೇಶವಾಗಿತ್ತು. ಅವರ ಮಾತನ್ನು ಮಾತ್ರ ನಾವು ಇಟ್ಟುಕೊಂಡು ಅರ್ಥವನ್ನು ಬಿಸಾಕಿದೆವು. ಈ ತಿರುಳಿಲ್ಲದ ಸಿಪ್ಪೆ ನಮ್ಮಲ್ಲಿ ಅಜೀರ್ಣವನ್ನುಂಟುಮಾಡಿ ನಮ್ಮ ಹೊಟ್ಟೆಶೂಲೆಗೆ ಕಾರಣವಾಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.

ಬ್ರಿಟಿಷರು ನಮ್ಮ ದೇಶವನ್ನು ಆಳಲಾರಂಭಿಸಿದ ಮೇಲೆ ಅವರು ನಮ್ಮ ಈ ಹೊಟ್ಟೆಶೂಲೆಗೆ ಹೊಸ ಶೂಲಗಳನ್ನು ಇಕ್ಕಲು ಪ್ರಾರಂಭಿಸಿದರೆಂಬುದನ್ನು ನಾವು ಗಮನಿಸಬೇಕು. ದಾರಿಗೆಟ್ಟ ಧರ್ಮ ಮತ್ತು ನೀತಿಗೆಟ್ಟ ಜಾತಿ ಇವುಗಳನ್ನಷ್ಟೇ ಎತ್ತಿ ಹಿಡಿದು ಸಮಗ್ರ ಸ್ವರೂಪವೇ ಕೆಟ್ಟದ್ದೆಂದು ಪ್ರಚಾರ ನಡಸಿದರು. ಮೇಲು ಕೀಳು ಭಾವನೆಯನ್ನೇ ಉದ್ರೇಕಗೊಳಿಸಿ ಪರಸ್ಪರ ದ್ವೇಷಾಸೂಯೆಗಳು ಹೆಚ್ಚುವಂತೆ ಮಾಡಿದರು. ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿಕಟ್ಟಿ ಒಡೆದು ಆಳುವ ತಮ್ಮ ನೀತಿಯನ್ನು ಯಶಸ್ವಿಗೊಳಿಸಿದರು. ನಮ್ಮಲ್ಲಿಯ ಕೆಲ ಪ್ರಜ್ಞಾವಂತರು ಈ ಬಗ್ಗೆ ಎಷ್ಟೇ ಎಚ್ಚರಿಕೆಯ ಗಂಟೆಯನ್ನು ಬಾರಿಸಿದರೂ ಜನಸಾಮಾನ್ಯರ ಕಿವಿಗೆ ಅದು ಕೇಳಲಿಲ್ಲ. ಪ್ರಭುತ್ವದ ಆಶ್ರಯ ಪಡೆದ ಸ್ವಾರ್ಥಿಗಳ ಹಾಗೂ ಸಂಧಿ ಸಾಧಕರ ಕೈಯೇ ಮೇಲಾಯಿತು. ಧರ್ಮವೆಂದರೆ ಅಂಧ ಶ್ರದ್ಧೆಯೆಂದು, ಜಾತಿಯೆಂದರೆ ಕಲಹಕ್ಕೆ ಕಾರಣವೆಂದೂ ಭಾವಿಸಿದೆವು. ಇಂದು ಅನೇಕ ದೃಷ್ಟಿಕೋನ, ಸಾಮಾಜಿಕ ಸಂಘಟನೆ ಮತ್ತು ರಾಜಕೀಯ ಚಟುವಟಿಕೆಗಳು ಇದೇ ಮನೋಧರ್ಮದಿಂದ ಕೂಡಿದುದನ್ನು ಕಾಣುತ್ತೇವೆ. ಇದು ನಮ್ಮ ಸಮಾಜದ ಚಕ್ರವನ್ನು ಪ್ರಗತಿಯೆಡೆಗೆ ನಡೆಸುವ ಬದಲು ವಿಗತಿಯೆಡೆಗೆ ಅಂದರೆ ಹಿಮ್ಮುಖವಾಗಿ ನಡೆಸುತ್ತದೆ. ಇದನ್ನು ನಾವು ಬೇಗ ಗುರುತಿದಷ್ಟೂ ಕ್ಷೇಮ.

ದೇಶ ಸ್ವತಂತ್ರವಾದಾಗ ಧರ್ಮನಿರಪೇಕ್ಷವಾದ ಜಾತ್ಯತೀತ ಸಮಾಜ ನಿರ್ಮಾಣದ ಪ್ರತಿಜ್ಞೆ ಸ್ವೀಕರಿಸಿದೆವು. ಈ ಮಾತನ್ನು ಸಂವಿಧಾನದಲ್ಲೇ ಸೇರಿಸಲಾಯಿತು. ಆದರೆ ಪ್ರತ್ಯಕ್ಷವಾಗಿ ನಡೆದದ್ದೇನು ? ಜನ್ಮ ಜಾಗತಿಗಳ ಸಂಬಂಧ ಹೆಚ್ಚು ಕಷ್ಟನಿಷ್ಟವಾಗಿದೆ. ಜಾತಿಯು ಸಾಮಾಜಿಕ ಕರ್ತವ್ಯಪ್ರಜ್ಞೆಯ ಸಂಕೇತಕ್ಕೆ ಬದಲಾಗಿ ಸರಕಾರದ ಕೃಪಾನುಗ್ರಹ ಸಂಪಾದನೆಯ ಸಾಧನವಾಗಿದೆ. ಜಾತಿಯಲ್ಲಿ ರಾಜಕೀಯ ಸೇರಿದೆ. ರಾಜಕೀಯದಲ್ಲಿ ಜಾತಿ ಸೇರಿದೆ. ರಾಜಕಾರಣಿಗಳು ಜನತೆಯ ಮೇಲಿನ ತಮ್ಮ ಹಿಡಿತವನ್ನು ಶಾಶ್ವತಗೊಳಿಸಿಕೊಳ್ಳಲು ಜಾತಿಯನ್ನು ಪ್ರಬಲ ಅಸ್ತ್ರವನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ಚುನಾವಣೆಯಲ್ಲಿ ಮತಗಳಿಕೆಯ ಸಾಮರ್ಥ್ಯ ಪಡೆಯುವುದೊಂದನ್ನೇ ಮುಖ್ಯ ಅಳತೆಗೋಲನ್ನಾಗಿಸಿಕೊಂಡಿರುವ ಇವರು ಸರಕಾರದ ಎಲ್ಲ ನೀತಿ ನಿಯಮಗಳಲ್ಲಿ ಜಾತಿಯ ದೃಷ್ಟಿಕೋನವನ್ನು ತುಂಬಿದ್ದಾರೆ.

ಹರಿಜನ-ಗಿರಿಜನ ಉದ್ಧಾರದ ವಿಚಾರ ಒಳ್ಳೆಯದು. ಆಧುನಿಕ ನಾಗರೀಕತೆಯ ಲಾಭಗಳಿಂದ ವಂಚಿತರಾಗಿ ಉಳಿದಿರುವ ಅವರನ್ನು ಸಮಾಜದ ಎಲ್ಲ ವರ್ಗದವರೊಡನೆ ಸರಿಸಮಾನ ಸ್ಥಿತಿಗೆ ತರಬೇಕೆಂಬ ಪ್ರಯತ್ನವನ್ನು ಎಲ್ಲರೂ ಬೆಂಬಲಿಸಬೇಕು. ಆದರೆ ಈ ಪ್ರಯತ್ನ ಅರೆಬರೆಯಾಗಲೀ, ಭಾಗಶಃವಾಗಲೀ, ಆಗಕೂಡದು. ಅದಕ್ಕೊಂದು ಸಮಗ್ರ ಸ್ವರೂಪ ಬೇಕು. ನಮ್ಮ ಸರಕಾರಗಳು ಕೈಕೊಂಡಿರುವ ಹರಿಜನ-ಗಿರಿಜನ ಉದ್ಧಾರದ ಯೋಜನೆಗಳು ಈ ಸಮಗ್ರ ಸ್ವರೂಪವನ್ನು ಗಮನಕ್ಕೆ ತಂದುಕೊಂಡಿಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ. ಅವು ಕೇವಲ ಹರಿಜನ-ಗಿರಿಜನ ಆರ್ಥಿಕ ಅಭಿವೃದ್ಧಿಯನ್ನೇ ಗುರಿಯಾಗಿ ಇಟ್ಟುಕೊಂಡಿವೆ ಇದಕ್ಕೆ ಪೂರಕವಾಗಿ ಅವರಿಗೆ ಯೋಗ್ಯ ಸಂಸ್ಕಾರವೂ ದೊರೆಯಬೇಕು. ಉಚಿತ ಸಂಸ್ಕಾರ ರಹಿತವಾದ ಆರ್ಥಿಕ ಅಭಿವೃದ್ಧಿ ಸಮಾಜದಲ್ಲಿ ಹೊಸ ಸಮಸ್ಯೆಗಳನ್ನು ಹುಟ್ಟಿಸುತ್ತದೆ. ಸಾಮಾಜಿಕ ನೆಮ್ಮದಿಯನ್ನು ಕಲಕುತ್ತದೆ ಮಹಾತ್ಮ ಬಸವೇಶ್ವರರಾಗಲಿ, ಮಹಾತ್ಮ ಗಾಂಧಿಯವರಾಗಲೀ, ದೀನದಲಿತರನ್ನು ಮೇಲಕ್ಕೆತ್ತಬೇಕೆಂದಾಗ ಈ ಮೂಲಭೂತ ತತ್ವವನ್ನು ಮರೆಯಲಿಲ್ಲ. ಇದನ್ನು ಗಮನಿಸದ ಸರಕಾರಿ ಯೋಜನೆಗಳ ಪರವಾಗಿ ಜನ ಹಣ ಗಳಿಸುತ್ತಿದ್ದಾರೆ. ಗುಣ ಕಳೆದುಕೊಳ್ಳುತ್ತಿದ್ದಾರೆ.

ಅರ್ಧ ಅಥವಾ ಮುಕ್ಕಾಲು ಶತಮಾನದ ಹಿಂದೆ ನಮ್ಮ ಸಮಾಜದಲ್ಲಿ ಇದ್ದ ಚಿತ್ರವನ್ನು ಸ್ವಲ್ಪ ಕಣ್ಮುಂದೆ ತಂದುಕೊಳ್ಳೋಣ. ಆಗ ಬೇರೆ ಬೇರೆ ಜಾತಿಯವರ ಓಣಿ ಕೇರಿಗಳೇ ಬೇರೆ ಬೇರೆಯಾಗಿರುತ್ತಿದ್ದುವು. ಒಬ್ಬರನ್ನೊಬ್ಬರು ಮುಟ್ಟಿದರೂ ಮೈಲಿಗೆ ಎಂದುಕೊಳ್ಳುತ್ತಿದ್ದರು. ಒಬ್ಬರ ನೀರನ್ನು ಇನ್ನೊಬ್ಬರು ಕುಡಿಯುತ್ತಿರಲಿಲ್ಲ

ಒಬ್ಬರೊಡನೆ ಇನ್ನೊಬ್ಬರು ಉಣ್ಣುತ್ತಿರಲಿಲ್ಲ. ಈ ಮಡಿ ಮೈಲಿಗೆ ಕಲ್ಪನೆಯಿಂದ ಇಂದು ಸಮಾಜ ಸಾಕಷ್ಟು ಮುಂದೆ ಬಂದಿದೆ. ಎಲ್ಲ ಜಾತಿ ಜನಾಂಗದವರು ಒಂದೆಡೆ ಕೂತು ಊಟ ಮಾಡುವುದು ಇಂದು ಆಶ್ಚರ್ಯದ ಸಂಗತಿಯಾಗಿ ಉಳಿದಿಲ್ಲ. ಬೇರೆ ಬೇರೆ ಜಾತಿಯವರು ನೆರೆವರೆಯವರಾಗಿ ಯಾವ ಆಕ್ಷೇಪಣೆ ಇಲ್ಲದೆ ಬಾಳುತ್ತಿರುವ ದೃಶ್ಯ ಅಪರೂಪವೇನಲ್ಲ. ಜಾತಿ ಜಾತಿಗಳವರಲ್ಲಿಯ ಒಳಬಳಕೆ ಅಂದಿಗಿಂತ ಇಂದು ಸಾಕಷ್ಟು ಹೆಚ್ಚಾಗಿದೆ. ಜಾತಿ ಜಾತಿಗಳಲ್ಲಿಯ ಸೌಹಾರ್ದ ನಿರ್ಮಾಣಕ್ಕೆ ಇದು ಹೆಚ್ಚು ಅನುಕೂಲ ವಾತಾವರಣವನ್ನು ನಿರ್ಮಿಸಿದೆ ಎಂಬುದನ್ನು ಗಮನಿಸಿ ನಾವು ಮುಂದಿನ ಹೆಜ್ಜೆ ಇಡಬೇಕು.

ಧರ್ಮದಂತೆ ಜಾತಿಯೂ ಭಾರತೀಯರ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಆದ್ದರಿಂದ ಜಾತಿ ಕುಲಬೇಧಗಳ ಹೆಸರೇ ಇಲ್ಲದೆ ವಿಶ್ವಕುಟುಂಬಿ ಮಾನವ ಕುಲವೆಲ್ಲ ಒಂದೇ ಎಂಬ ಸಮಾಜ ನಿರ್ಮಾಣದ ಗುರಿಯತ್ತ ನಾವು ಇಂದು ಇಡಬೇಕಾದ ಹೆಜ್ಜೆ ಏನು ಎಂಬುದನ್ನು ಆಲೋಚಿಸೋಣ. ವಿಧ್ವಂಸಕ ಮಾರ್ಗ ಕ್ಕಿಂತ ವಿಧಾಯಕ ಕಾರ್ಯದತ್ತ ಲಕ್ಷ್ಯ ಕೊಡೋಣ. ಪ್ರತಿಯೊಂದು ಜಾತಿಯಾದರೂ ವಿಶ್ವಕುಟುಂಬಿ ಮಾನವ ಕುಲ ನಿರ್ಮಾಣಕ್ಕೆ ತಾನು ಸಲ್ಲಿಸಬೇಕಾದ ಸೇವೆ ಏನು ಎಂಬುದನ್ನು ಪರಿಶೀಲಿಸಲಿ. ಇದಕ್ಕಾಗಿ ಒಂದೊಂದು ಜಾತಿಯವರು ಒಂದೆಡೆ ಸೇರಿ. ನಿಮ್ಮಲ್ಲಿಯ ಆಂತರಿಕ ಲೋಪದೋಷಗಳನ್ನು, ಕುಂದುಕೊರತೆಗಳನ್ನೂ ವಿಮರ್ಶಿಸಿರಿ. ಕೆಟ್ಟದಾದುದನ್ನು ಕಳೆಯಿರಿ. ಒಳ್ಳೆಯದಿರುವುದನ್ನು ಬೆಳೆಸಿರಿ. ಬೇರೆ ಜಾತಿಯವರೊಡನೆ ಹೊಂದಿಕೊಳ್ಳುವುದು ಹೇಗೆ? ಅವರೊಡನೆ ಪ್ರೇಮ, ಸೌಹಾರ್ದ, ಸ್ನೇಹಗಳಿಂದ ಬಾಳುವುದು ಹೇಗೆ ಪರಸ್ಪರರಲ್ಲಿಯ ದ್ವೇಷ ವೈರ ಗಳನ್ನು ಇಲ್ಲದಂತೆ ಮಾಡುವುದು ಹೇಗೆ? ಎಂಬಿವೇ ಪ್ರಶ್ನೆಗಳನ್ನು ಚರ್ಚಿಸಿರಿ. ಒಂದೊಂದು ಜಾತಿಯವರೂ ಅನೇಕ ಒಳಪಂಗಡಗಳಲ್ಲಿ ಹಂಚಿಹೋಗಿರುವುದು ಸರ್ವವಿದಿತ. ಈ ಒಳಪಂಗಡಗಳು ಅವರವರ ವೈಯ್ಯಕ್ತಿಕ ಒಲವು ನಿಲುವುಗಳಿಗೆ ಸಂಬಂಧಪಟ್ಟವುಗಳು. ಅವುಗಳನ್ನು ಅಷ್ಟಕ್ಕೇ ಸೀಮಿತಗೊಳಿಸಬೇಕು ಸಾಮಾಜಿಕ ಮತ್ತು ಸಾರ್ವಜನಿಕ ಜೀವನಗಳಲ್ಲಿ ಅವು ಪ್ರಮುಖ ಸ್ಥಾನ ಪಡೆಯಬಾರದು ಪ್ರತಿಯೊಂದು ಜಾತಿಯವರೂ ನಿಮ್ಮ ನಿಮ್ಮ ಒಳಪಂಡಗಳನ್ನು ಒಳಗೊಳಗೇ ಇಟ್ಟುಕೊಂಡು ಒಂದಾಗುವುದನ್ನು ಕಲಿಯಿರಿ ಅದರೊಡನೆಯೇ ಅನ್ಯ ಜಾತಿಯವ ರೊಡನೆ ಹೊಂದಿಕೊಳ್ಳುವುದನ್ನು ಬೆಳೆಸಿಕೊಳ್ಳಿರಿ. ಸಮ್ಮೇಳನಗಳು ಜಾತಿಯ ವಾದರೂ ಅವುಗಳ ನಡವಳಿಕೆ ಮತ್ತು ಫಲಶ್ರುತಿಗಳು ಜಾತ್ಯಾತೀತ ಸಮಾಜಕ್ಕೆ ಪೋಷಕವಾಗಬೇಕು. ಬ್ರಾಹ್ಮಣರು, ವೀರಶೈವರು, ಆರ್ಯವೈಶ್ಯರು, ಕ್ಷತ್ರಿಯರು ಇತ್ಯಾದಿ ಎಲ್ಲರೂ ತಮ್ಮ ತಮ್ಮ ಆಂತರಿಕ ಸಂಘಟನೆಗಳ ಮೂಲಕ ಹಿಂದೂ

ಸಂಸ್ಕೃತಿಯ ಪುನರುತ್ಥಾನಕ್ಕೆ ಮಾರ್ಗ ಮಾಡಿಕೊಡಬೇಕು. ರಾಷ್ಟ್ರೀಯ ಭಾವೈಕ್ಯಕ್ಕೆ ಭದ್ರ ಬುನಾದಿಯ ನಿರ್ಮಾಣ ಮಾಡಬೇಕು. ಇಂಥ ಸತ್‌ಪ್ರವೃತ್ತಿ ಪ್ರಚೋದನೆಯತ್ತ ಹುಬ್ಬಳ್ಳಿಯಲ್ಲಿ ಸೇರಿರುವ ಅಖಿಲ ಕರ್ನಾಟಕ ಬ್ರಾಹ್ಮಣ ಸಮ್ಮೇಳನವು ಪ್ರಥಮ ಹೆಜ್ಜೆಯನ್ನು ಇಟ್ಟಿದೆ. ಇದು ಸರ್ವರಿಗೂ ಅನುಕರಣಿಯವಾಗಲಿ. ಇದರ ಸತ್ಫಲಗಳನ್ನು ಎಲ್ಲರೂ ಸೇವಿಸಿ, "ಇವನಾರವ, ಇವನಾರವ, ಇವನಾರವನೆಂದಿನಿಸದಿರಯ್ಯಾ, ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ ಎನ್ನುವ ಬಸವವಾಣಿ ನಮ್ಮೆಲ್ಲರಲ್ಲಿ ಭಾವೈಕ್ಯತೆಯನ್ನುಂಟುಮಾಡುವಂತೆ ಕರ್ತೃ ಜಗದ್ಗುರು **ಗುರುಸಿದ್ದೇಶ್ವರರು** ಕರುಣಿಸಲಿ.

॥ ಸತ್ಯಂ ಶಿವಂ ಸುಂದರಂ ॥



# ಕ್ಯಾತನಹಳ್ಳಿಯ ಕೇತಕಿ ಹೂವು

ಕ್ಯಾತನಹಳ್ಳಿ ಮೈಸೂರು ಜಿಲ್ಲೆಯಲ್ಲಿರುವ ಒಂದು ನೆಮ್ಮದಿಯ ಗ್ರಾಮ, ಊರು ತುಂಬಾ ಕೃಷಿಕ ಸಮಾಜದ ಜನತೆ. ಊರಿನ ಪುಣ್ಯವೇ ಪುರುಷರೂ ತಾಳಿದಂತೆ ಬಾಳಿದವರು ದಿ॥ ಶ್ರೀ ಸಾಹುಕಾರ್ ಕೆ. ಶ್ರೀಕಂಠಯ್ಯನವರು. ಅವರ ಧರ್ಮಪತ್ನಿ ಗಿರಿಜಮ್ಮನವರು. ಸತಿ-ಪತಿಗಳೊಂದಾಗಿ ಬಾಳು ನಡೆಸಿದರು. ಆ ತುಂಬು ಸಂಸಾರದಲ್ಲಿ ಬೆಳೆಯದವರಿಲ್ಲ, ನಕ್ಕು ನಲಿಯದವರಿಲ್ಲ. ಸುತ್ತಲ ಹಳ್ಳಿಗಳಿಗೆ ಕಣ್ಣಾಗಿ ಶ್ರೀಕಂಠಯ್ಯನವರು ಬೆಳೆದರು. ಅವರ ಔದಾರ್ಯದ ನೆರೆಗಳಲ್ಲಿ ಅದೆಷ್ಟೋ ಮಂದಿ ಜೀವನಕ್ಕೆ ದಾರಿಕಂಡುಕೊಂಡರು. ಉಪ್ಪಿಟ್ಟವರನ್ನು ಮುಪ್ಪಿನಲ್ಲಿ ನೆನೆದು ಬಾಳಿದರು. ಶ್ರೀಕಂಠಯ್ಯನವರು ಸಂಸ್ಕಾರ ಜೀವಿಗಳು. ದೈವ, ಧರ್ಮಗಳಲ್ಲಿ ಅಚಲವಾದ ನಿಷ್ಠೆ ಇಟ್ಟುಕೊಂಡವರು. ಮಕ್ಕಳೊಂದಿಗರು. ಅವರ ಪ್ರೀತಿಯ ಮಗನಾಗಿ ಜನಿಸಿದರು ಶ್ರೀ ಕೆ ಎಸ್. ಬಸವಲಿಂಗಪ್ಪ ನವರು.



ಶರಣ ಕೆ.ಎಸ್. ಬಸವಲಿಂಗಪ್ಪನವರು (ಕ್ಯಾತನಹಳ್ಳಿ) ಮೈಸೂರು ನಗರದಲ್ಲಿ ನಡೆದ ಶ್ರೀ ಬಸವಜಯಂತಿ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀಗಳವರಿಗೆ ಶ್ರೀ ಕ್ಷೇತ್ರದಲ್ಲಿ ನಿರ್ಮಾಣವಾಗುತ್ತಿರುವ ಶಿವಯೋಗ ಮಂದಿರಕ್ಕೆ ಹತ್ತು ಸಹಸ್ರ ರೂಗಳನ್ನು ಶ್ರೀ ಶ್ರೀ ಸುತ್ತೂರು ಜಗದ್ಗುರುಗಳ ಸಮ್ಮುಖದಲ್ಲಿ ಅರ್ಪಿಸುತ್ತಿರುವುದು.

ಬದುಕು ಜಟಕಾ ಬಂಡಿ ವಿಧಿಯದರ ಸಾಹೇಬ' ಎಂದಿದೆ ಕವಿವಾಣಿ. ಬಸವಲಿಂಗಪ್ಪನವರ ಬದುಕು ಕವಿವಾಣಿಗೆ ಭಾಷ್ಯವೆಂಬಂತೆ ಕಾಣಬಂದಿದೆ. ಹುಟ್ಟಿದ ಮೂರನೆ ವರ್ಷಕ್ಕೆ ತಾಯಿಯನ್ನು (ಗಿರಿಜಮ್ಮನವರನ್ನು) ಕಳೆದುಕೊಂಡು, 'ತಾಯಿ ಸತ್ತ ಮಗು" ವಾಗಿ ಬೆಳೆಯುವಂತಾಯಿತು. ತಮ್ಮ ಇಪ್ಪತ್ತು ವರ್ಷಗಳ ವಯಸ್ಸಿನವರೆಗೆ ನಡೆಸಿದ ಹೋರಾಟದ ವ್ಯಥೆ ಕಥೆಯಾಗುವಂತೆ ಸಾಗಿತು. ಆದರೂ ಹೋರಾಟದಲ್ಲಿಯೇ ಅರ್ಥ, ತೃಪ್ತಿ ಕಂಡರು–ಬಸವಲಿಂಗಪ್ಪನವರು. ತಂದೆಯಿಂದ ಹರಿದು ಬಂದು ಗುಣಗಳನ್ನು ಮೈಗೂಡಿಸಿಕೊಂಡ ಅವರು, ದೇಶಪ್ರೇಮದ ನಿಸ್ಸೀಮ ಭಕ್ತರಾದರು. ಅದರ ಫಲವಾಗಿ ರಾಜಕೀಯ ರಂಗದಲ್ಲಿ ದುಡಿಯಲು ಪ್ರಾರಂಭಿಸಿದರು. ಸೆರೆಮನೆ ವಾಸವನ್ನು ಸವಿದರು. ಅನುಭವ ವೈವಿಧ್ಯಕ್ಕೆ ಎದೆ ತೆರೆದರು. ಉದಾತ್ತ ಧ್ಯೇಯಗಳೊಂದಿಗೆ ಬಾಳು ನಡೆಸಬೇಕೆಂಬ ವ್ಯಕ್ತಿಗೆ ನೂರೆಂಟು ಏಟುಗಳು; ಸಾವಿರಾರು ಮಾತುಗಳು, ಲೋಕಧರ್ಮವೇ ಹಾಗೆನ್ನಿಸುತ್ತೆ.

ಕಾರಾಗೃಹದಿಂದ ಹಿಂತಿರುಗಿದ ಮೇಲೆ ಬಸವಲಿಂಗಪ್ಪನವರು ಗೃಹಸ್ಥಾಶ್ರಮಕ್ಕೆ ತೊಡಗಿದರು. ವೈವಾಹಿಕ ಜೀವನವನ್ನು ಆನಂದಾಯಕವಾಗಿ ಮಾಡಿದ ಮಡದಿ ಶ್ರೀಮತಿ ಕಮಲಮ್ಮನವರು, ಬಸವಲಿಂಗಪ್ಪನವರು ಹೃತ್ಕಲಶವಾದರು. ಜೀವನ ಹಿತವಾಗಿ ಸಾಗಿತು. ನಡೆವರೆಡಹದೆಕುಳಿತವರದು ಹುವಕೆ," ಬದುಕಿನಲ್ಲಿ ತಪ್ಪು ಮಾಡದವರಾರು ? ಆದ ತಪ್ಪನ್ನು ತಿದ್ದಿಕೊಳ್ಳುವಲ್ಲಿಯೇ ಅಲ್ಲವೇ ಮಾನವೀಯತೆಯ ಕುಸುಮ ಅರಳುವುದು. ಉದ್ದಕ್ಕೂ ತಮ್ಮನ್ನು ಕಾಪಾಡಿದ್ದು, ಎಚ್ಚರಿಸಿದ್ದು, ಕೈಹಿಡಿದು ನಡೆಸಿದ್ದು, ಪರಮ ಪೂಜ್ಯ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳ ಆಶೀರ್ವಾದ ಎಂಬ ಅಚಲ ನಂಬಿಕೆ, ಶ್ರದ್ಧಾಭಕ್ತಿಯಾಗಿ ಅರಳುವಂತಾಯಿತು.

ವ್ಯಕ್ತಿಯ ಆಸೆಗಳು ಅನಂತ. ಅದರೆ ಅವುಗಳು ಕೈಗೂಡುವುವೆಷ್ಟು ಎಂಬುದು ಕಾಲಸರಿದ ಮೇಲೆ ತಿಳಿಯುವಂತಹದು. ಎಲ್ಲ ತಂದೆಗಳಂತೆ ಬಸವಲಿಂಗಪ್ಪನವರಿಗೂ ಮಕ್ಕಳನ್ನು ದೊಡ್ಡ ವಿದ್ಯಾವಂತರನ್ನಾಗಿಸಬೇಕು, ಉನ್ನತ ಅಧಿಕಾರಿಗಳನ್ನಾಗಿಸಿ ನೋಡಬೇಕು ಎಂಬ ಬಯಕೆ. ಅದಕ್ಕಾಗಿ ಕ್ಯಾತನಹಳ್ಳಿಯನ್ನು ಬಿಟ್ಟು ಮೈಸೂರಿಗೆ ಬಂದರು. ಮನೆಕಟ್ಟಿದರು, ಮಕ್ಕಳು ಓದಿದರು, 'ತಾನೊಂದ ನೆನೆದರೆ ದೈವವೊಂದ ನೆನೆದೀತು' ಎನ್ನುವಂತೆ ಬಸವಲಿಂಗಪ್ಪನವರಿಗಾಯಿತು. ಅಂದುಕೊಂಡದ್ದೆಲ್ಲಾ ಆಗಲಾರದಲ್ಲವೇ ? ಸ್ವಾಭಿಮಾನದ ಬಂಗಾರದ ಭಾವನೆಯು ಒಮ್ಮೊಮ್ಮೆ ಆಂತರಿಕನೋವಿಗೆ ಕಾರಣವಾಗಿ, ವ್ಯಕ್ತಿಯ ಜೀವನವನ್ನು ಪಕ್ವವಾಗಿಸುವ ಕಾವು ಕೊಡುತ್ತದೆ. ತಮ್ಮದು 'ನೊಂದಬಾಳು' ಎನ್ನುವ ಶ್ರೀಯುತರ ಮಾತು ಅವರ ಅಂತಃಕರಣ ಅರಳುತ್ತಿರುವುದರ ಕುರುಹಾಗಿ ಕಾಣುತ್ತದೆ. ಕೌಟುಂಬಿಕ ಜೀವನ ಶಾಂತಿಯನ್ನು ಕಳೆದುಕೊಂಡು, ಅಪಾರ ಯಾತನೆಗೆ ಒಳಗಾಗಿ ಶ್ರೀಯುತರ



ಸುಸಂಸ್ಕೃತ ಮನಸ್ಸು ಮಂಗಳವನ್ನೇ ತನ್ನ ಮಡದಿ ಮಕ್ಕಳಿಗೆ ಹಾರೈಸುತ್ತದೆ. ಇಳಿವಯಸ್ಸಿನಲ್ಲಿ, ಬಾಳಿನ ಸಂಜೆಯನ್ನು ಕಳೆಯುತ್ತಿರುವ ಬಸವಲಿಂಗಪ್ಪನವರ ಚೇತನ – ಮಂಥನಗಳಲ್ಲಿ ದಾನ ಧರ್ಮದೆಡೆಗೆ ಹೆಚ್ಚು ಹೆಚ್ಚಾಗಿ ಹರಿಯುತ್ತಿದೆ. ಸಿದ್ಧಗಂಗಾ ಶ್ರೀ ಶ್ರೀ ಗಳಲ್ಲಿ ಅವರಿಟ್ಟಿರುವ ಭಕ್ತಿ ಅಪಾರವಾಗಿದೆ. ಗುರುಲಿಂಗ ಜಂಗಮ ಪ್ರೇಮಿಗಳಾಗಿ ಬಾಳಿದ ಬಸವಲಿಂಗಪ್ಪನವರು, ಶ್ರೀ ಕ್ಷೇತ್ರದಲ್ಲಿ ನಿರ್ಮಾಣವಾಗುತ್ತಿರುವ "ಶಿವಯೋಗ ಮಂದಿರ" ಕ್ಕಾಗಿ ತುಂಬು ಹೃದಯದಿಂದ, ಹತ್ತು ಸಹಸ್ರ ರೂಪಾಯಿಗಳನ್ನು ನೀಡಿದ್ದಾರೆ. ಬೆಟ್ಟವೇ ಮೇಲೆ ಹರಿದು ಬಿದ್ದರೂ ಅದನ್ನು ಸಹಿಸುವ ತಾಳ್ಮೆ ತ್ರಾಣವನ್ನು ಪಡೆದಿರುವ ಬಸವಲಿಂಗಪ್ಪನವರು, ಶ್ರೀ ಶ್ರೀ ಗಳವರ ಅಂತರಂಗದ ಭಕ್ತರಾಗಿ ನಡೆದಿದ್ದಾರೆ. ಗುಪ್ತ ಭಕ್ತಿಗೆ ಉದಾಹರಣೆಯಾಗಿ, ಅವರೊಂದು ಕೇತಕೀ ಹೂವು.

ಶರಣಧರ್ಮದ ಅನುಯಾಯಿಗಳಾದ ಬಸವಲಿಂಗಪ್ಪನವರು ಬಸವ ಜಯಂತಿ ಕಾರ್ಯಕ್ರಮಗಳಲ್ಲಿ ಉತ್ಸಾಹಿಗಳಾಗಿ ಸಕ್ರಿಯವಾಗಿ ದುಡಿದಿದ್ದಾರೆ. ಮೈಸೂರು ನಗರದಲ್ಲಿ 'ಜಗಜ್ಯೋತಿ ಬಸವೇಶ್ವರ' ನಾಟಕವನ್ನು ಪ್ರದರ್ಶಿಸಿದಾಗ, ಶ್ರೀ ಕ್ಷೇತ್ರದ ಕಲಾವೃಂದದವರು, ಶ್ರೀಯುತರು ಆದರಾಭಿಮಾನಗಳಿಂದ ಸಹಕರಿಸಿ ಶ್ರೀ ಶ್ರೀ ಗಳವರ ಆಶೀರ್ವಾದದಿಂದ ಸಂತಸಗೊಂಡರು. ಶ್ರೀಯುತ ಬಸವಲಿಂಗಪ್ಪ ಕೆ. ಎಸ್. ಅವರು ಬಾಳು, ಜೀವನಸಂಧ್ಯೆಯಲ್ಲಿರುವ ಅವರಿಗೆ ಶ್ರೀ ಸಿದ್ಧಗಂಗಾ ಆಯುರಾರೋಗ್ಯ ಮಂಗಳವನ್ನು ಹಾರೈಸುತ್ತದೆ.

# ಬದುಕಿನ ಸತ್ಯವೇ ದೇವರು

—ಹೆಚ್. ಎಸ್. ಚಂದ್ರಕಾಂತ

ದೇವರು–ಹಾಗೆಂದರೇನು ? ಇದು ನಿಜಕ್ಕೂ ಅತ್ಯಂತ ಮಹತ್ವದ ಚಿಂತನಾತ್ಮ ಕವೂ, ವಿಶ್ಲೇಷಣಾತ್ಮಕವೂ ಆದ ಪ್ರಶ್ನೆ. ಈ ಭೂಮಿಯ ಮೇಲೆ ಬದುಕಿರುವ ಪ್ರತಿ ಯೊಬ್ಬ ಮಾನವನೂ ವಿಚಾರ ಮಾಡಬೇಕಾದ ಪ್ರಶ್ನೆ. ದೇವರು ಎಂದರೇನು ? ಮಾನವ ವಿಚಾರ ಮಾಡುವ ಶಕ್ತಿಯನ್ನು ಬೆಳೆಯಿಸಿಕೊಂಡಾಗಿನಿಂದ ದೇವರ ಅನ್ವೇ ಷಣೆಯನ್ನು ಮಾಡುತ್ತಲೇ ಬಂದಿದ್ದಾನೆ. ಭವಿಷ್ಯಗರ್ಭದಲ್ಲಿ ನಿಗೂಢ ರೀತಿಯಲ್ಲಿ ಅಡಗಿರುವ ದೇವರನ್ನು, ಬದುಕಿನ ಸತ್ಯವನ್ನು, ಅಷ್ಟೇ ಖುದ್ದಾಗಿ ನಿರ್ವಿಕಾರವೂ ನೈಜವೂ ಆದ ರೀತಿಯಲ್ಲಿ ಅನ್ವೇಷಣೆ ಮಾಡುವುದೇ ಜೀವನದ ಮೂಲಭೂತ ಉದ್ದೇಶವಾಗಿದೆ.

ಅತ್ಯಂತ ಪವಿತ್ರವೂ, ಚಿರಂತನವೂ ಪರಮ ಮೌಲಿಕವೂ ಆದ ಧಾರ್ಮಿಕ ಇತಿಹಾಸವುಳ್ಳ ಭವ್ಯ ಭಾರತ ದೇಶದಲ್ಲಿ ದೇವರ ವಿಷಯದಲ್ಲಿ ಬದುಕಿನ ಸತ್ಯದ ವಿ ಷ ಯ ದ ಲ್ಲಿ ವಿವೇಕಶೂನ್ಯರಾಗಿ ವರ್ತಿಸುವುದನ್ನು ನಾವಿಂದು ಕಾಣುತ್ತಿದ್ದೇವೆ.

ಬದುಕು ಎಂದರೇನು ? ನಾವು ಬದುಕುತ್ತಿರುವುದು ಯಾತಕ್ಕಾಗಿ ಎಂದು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ. ನಿಜಕ್ಕೂ ಜೀವನವೆಂದರೆ ವಿಚಾರ ಶೂನ್ಯರಾಗಿ ವಾದ ಮಾಡುವುದಾಗಲೀ, ತಮಗೆ ತಿಳಿದ ರೀತಿಯಲ್ಲಿ ವರ್ತಿಸುವು ದಾಗಲಿ ಅಲ್ಲ. ಬದುಕು ಅತ್ಯಂತ ಗಹನವಾದುದು, ಆಳವಾದುದು. ವಿಚಾರ ಮಾಡಿದಷ್ಟೂ ವಿಶಾಲವಾದುದು, ಅಷ್ಟೇ ನಿಗೂಢವಾದುದು. ಎಷ್ಟೆಷ್ಟು ತತ್ವರಹಿತ ವಾದ ಮಾಡುತ್ತ ಎಷ್ಟೆಷ್ಟು ವಿಚಾರಹೀನವಾಗಿ, ಅ ನೈ ತಿ ಕ ವಾ ಗಿ ವರ್ತಿಸುತ್ತೀ ವೆಯೋ ಅಷ್ಟಷ್ಟೂ ದೇವರಿಂದಲೂ, ಬದುಕಿನ ಸತ್ಯದಿಂದಲೂ ದೂರ ಹೋಗುತ್ತಿ ದ್ದೇವೆ. ಮಾನವ ವೈಜ್ಞಾನಿಕವಾಗಿ ಮುಂದುವರಿಯುತ್ತ ನೈತಿಕವಾಗಿ ಹಿಂದೆ ಬೀಳು ತ್ತಿದ್ದಾನೆ.

ದೇವರನ್ನು ಇಂದ್ರಿಯಗೋಚರವಾಗಿ ಕಾಣುವ ಸಾಹಸವನ್ನು ಮಾಡುವುದಕ್ಕೆ ಪ್ರಯತ್ನಿಸಬಾರದು !

ದೇವರು ಅಮೂರ್ತ ರೂಪದಲ್ಲಿರುವ ಬದುಕಿನ ಪರಿಪೂರ್ಣ ಸತ್ಯದ ಇನ್ನೊಂದು ಮುಖ. ದೇವರೆಲ್ಲಿರುವನು? ನಾವು ಎಷ್ಟೆಷ್ಟು ದೈಹಿಕವಾಗಿಯೂ

ಅಂತರಿಕವಾಗಿಯೂ ಪರಿಶುದ್ಧರಾಗಿ, ಅತೀಂದ್ರಿಯ ಧ್ಯಾನ, ತಪಸ್ಸಿನಲ್ಲಿ ತೊಡಗುತ್ತೇವೆಯೋ ಅಷ್ಟಷ್ಟೂ ದೇವರಿಗೆ ಸಮೀಪ[illegible]ಗುತ್ತ ಮುನ್ನಡೆಯುತ್ತೇವೆ.

ಆಧುನಿಕ ನಾಗರಿಕತೆ ಬೆಳೆದಂತೆಲ್ಲ ಅಷ್ಟೇ ವೇಗದಲ್ಲಿ ಜೀವಂತ ಮೌಲ್ಯಗಳ ಅವಸಾನವಾಗುತ್ತಿದೆ. ನಿಜಕ್ಕೂ ಈಗ ಉನ್ನತ ಜೀವನ ಮೌಲ್ಯಗಳ ಪುನರುತ್ಥಾನದ ಸಂಧಿಕಾಲವಾಗಿದೆ ಮಾನವನು ಇಂದು ಸಾಮಾಜಿಕವಾಗಿಯೂ ನೈತಿಕವಾಗಿಯೂ ಭೂಮಿಯ ಮೇಲೆ ವಾಸಿಸುತ್ತಿರುವುದರ ವಾಸ್ತವಿಕ ಹಿನ್ನಲೆಯೇನು? ತನ್ನ ಅಸ್ತಿತ್ವಕ್ಕೆ ಅರ್ಥವೇನಿದೆ ಎಂಬುದನ್ನು ವಿಚಾರಮಾಡಬೇಕು. ಬದುಕು ಖಂಡಿತವಾಗಿಯೂ ಅತ್ಯಂತ ಅರ್ಥಗರ್ಭಿತವಾದದ್ದು. ಬದುಕಿನ ಸತ್ಯವು (ದೇವರು) ಅತ್ಯಂತ ಮೌಲ್ಯವುಳ್ಳದ್ದಾಗಿದೆ.

ಪ್ರಚಲಿತ ವಿದ್ಯಮಾನಗಳು ಮಾನವನನ್ನು ಬದುಕಿನ ಸತ್ಯದಿಂದ ಬಹಳ ದೂರ ಕೊಂಡೊಯ್ಯುತ್ತಿವೆ. ಬದುಕಿನ ಸತ್ಯದಿಂದ ವಂಚಿತನಾಗಿ ಬದುಕೇ ಮಿಥ್ಯ ಎಂದು ಭ್ರಮೆ ಪಡುತ್ತಿದ್ದಾನೆ. ಎಂತಹ ವಿಪರ್ಯಾಸ !

ಜೀವನವು ಮಾನವನ ಆಸೆ ಆಕಾಂಕ್ಷೆಗಳ ಈಡೇರಿಕೆಗಳಿಗಾಗಲಿ, ನೋವು ನಲಿವುಗಳಿಗಷ್ಟೇ ಆಗಲಿ ಸೀಮಿತವಾದುದಲ್ಲ. ಅದು ಇದಕ್ಕಿಂತಲೂ ಹೆಚ್ಚಿನ ಮಹತ್ವವುಳ್ಳದ್ದಾಗಿದೆ. ಬದುಕಿನ ವೈಪರೀತ್ಯಗಳ ಅರ್ಥವೇನು ? ಜನನ ಬಾಲ್ಯ ಯೌವನದಿಂದ ಮುಂದಕ್ಕೆ ದೇಹವಿಕಾರದಿಂದ ಕೂಡಿದ ವೃದ್ಧಾಪ್ಯ ನಂತರ ವಿನಾಶ-ಸಾವು? ಇವೆಲ್ಲವುಗಳ ಅರ್ಥವೇನು? ನಿಜಕ್ಕೂ ಯಾವ ವೈಜ್ಞಾನಿಕ ಸಂಶೋಧಕನೂ ವಿನಾಶದ ಹಾದಿಯಿಂದ ತಪ್ಪಿಸಿ ಕೊಳ್ಳಲು ಸಾಧ್ಯವಿಲ್ಲ. ಈ ವಿನಾಶದ ಸಾವಿನಿಂದ ದೂರವಾಗಿ ಬದುಕಿನ ಪೂರ್ಣತ್ವವನ್ನು ಪಡೆಯುವುದು ನಾವು ಬದುಕಿನ ಸತ್ಯ (ದೇವರು)ವನ್ನು ಕಂಡುಕೊಂಡಾಗ ಮಾತ್ರ ಸಾಧ್ಯ.

——(ಮೇ 1981ರ ಕಸ್ತೂರಿಯಿಂದ

---

### ಬಸವಣ್ಣನವರ ಅಮೃತವಾಣಿ

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಸಿಕೊಂಬಂತೆ
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ
ಹುಲಿಯ ಮೀಸೆಯ ಹಿಡಿದುಕೊಂಡು ಒರೆದುಯ್ಯಾಲನಾಡುವಂತೆ
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ,
ಸುಣ್ಣದ ಕಲ್ಲ ಮಡಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

ಪುರಾಣ ಮುನಿಗಳು—೪

# ಉಪಮನ್ಯು

—ಪ. ರಾಮಕೃಷ್ಣಶಾಸ್ತ್ರಿ

ವ್ಯಾಘ್ರಪಾದ ಋಷಿಯ ಮಗ, ಆಪೋದನ ಸಹೋದರ ಉಪಮನ್ಯು. ಒಂದು ದಿನ ಆತ ಬೇರೊಬ್ಬ ಋಷಿಯ ಆಶ್ರಮದಲ್ಲಿ ಹಾಲು ಕುಡಿದು ಬಂದ. ಅದು ವರೆಗೂ ಹಾಲನ್ನು ಕಂಡಿರದ ಆತ ಹಾಲಿಗಾಗಿ ತಾಯಿಯನ್ನು ಪೀಡಿಸಿದ. ಅವಳು ನೀರಿನಲ್ಲಿ ಹಿಟ್ಟನ್ನು ಕದಡಿ ಕೊಟ್ಟಳು. ಉಪಮನ್ಯು ನಿಜವಾದ ಹಾಲೇ ಬೇಕೆಂದು ಅತ್ತಾಗ ಆಕೆ "ಶಿವನನ್ನು ತಪಸ್ಸಿನಿಂದ ಒಲಿಸಿಕೋ. ಅವನು ನಿನ್ನ ಇಷ್ಟಾರ್ಥ ನೆರವೇರಿಸುತ್ತಾನೆ" ಎಂದಳು. ಉಪಮನ್ಯು ಸಹಸ್ರ ವರ್ಷಗಳ ಕಾಲ ತಪಸ್ಸು ಮಾಡಿದ.

ಶಿವನು ದೇವೇಂದ್ರನ ರೂಪದಲ್ಲಿ ಅವನೆದುರು ಕಾಣಿಸಿಕೊಂಡು ಬೇಕಾದ ವರವನ್ನು ಕೋರುವಂತೆ ಕೇಳಿದಾಗ "ಶಿವನಿಂದ ಹೊರತು ಬೇರೆ ಯಾರಿಂದಲೂ ನನಗೆ ವರ ಬೇಡ" ಎಂದ ಉಪಮನ್ಯು.

ಶಿವನು ನಿಜಸ್ವರೂಪದಲ್ಲಿ ಮೈದೋರಿದ. ಉಪಮನ್ಯು ಅವನಲ್ಲಿ "ಭೂತ, ಭವಿಷ್ಯ, ವರ್ತಮಾನಗಳ ಜ್ಞಾನಭಂಡಾರವನ್ನು ಸಾಕಷ್ಟು ಹಾಲನ್ನೂ ಆಹಾರವನ್ನೂ ನನಗೆ ಕರುಣಿಸು. ನೀನು ನಮ್ಮ ಆಶ್ರಮದಲ್ಲಿ ನೆಲೆಸಿರು" ಎಂದು ಬೇಡಿದ. ಶಿವನು ಅವನಿಗೆ ಅನುಗ್ರಹಿಸಿ, ಪಾಲ್ಗಡಲ ಅಧಿಪತಿಯೇ ಅವನಾಗುವಂತಹ ದೊಡ್ಡ ಪಶು ಮಂದೆಯನ್ನೇ ಕರುಣಿಸಿದ.

ಉಪಮನ್ಯುವು ವಿದ್ಯಾಭ್ಯಾಸಕ್ಕಾಗಿ ಧೌಮ್ಯನ ಬಳಿಗೆ ಹೋದಾಗ ಅವನ ಪಶು ಮಂದೆಯನ್ನು ಧೌಮ್ಯನು ಕೇಳಿ ತೆಗೆದುಕೊಂಡ. ಅವುಗಳನ್ನು ಕಾಡಿಗೆ ಅಟ್ಟಿಕೊಂಡು ಹೋಗಿ ಮೇಯಿಸಿಕೊಂಡು ಬರುವ ಹೊಣೆಯೂ ಉಪಮನ್ಯುವಿನದಾಗಿತ್ತು. ಆಶ್ರಮವಾಸದ ಕಠಿಣತೆಯಿಂದ ಉಳಿದ ಶಿಷ್ಯರು ಕೃಶಕಾಯರಾಗಿದ್ದರೆ ಉಪಮನ್ಯು ದಷ್ಟಪುಷ್ಟನಾದ. ಇದನ್ನು ನೋಡಿ ಧೌಮ್ಯನು ಅದರ ಕಾರಣ ವಿಚಾರಿಸುವಾಗ ಅವನು ಪಶುಗಳನ್ನು ಮೇಯಿಸಲು ಕಾಡಿಗೆ ಹೊದಾಗ ಅಕ್ಕ ಪಕ್ಕದ ಹಳ್ಳಿಗಳಿಗೆ

ಹೋಗಿ ಭಿಕ್ಷೆ ಬೇಡಿ ತಂದು ತಿನ್ನುತ್ತಿರುವುದು ಗೊತ್ತಾಯಿತು. ಧೌಮ್ಯನು "ಹಾಗೆ ಮಾಡಬಾರದು. ಬೇಡಿದುದನ್ನು ಗುರುವಿಗೇ ತಂದೊಪ್ಪಿಸಬೇಕು" ಎಂದನು.

ಹೀಗೆ ಭಿಕ್ಷೆಯನ್ನು ತಂದೊಪ್ಪಿಸುತ್ತಿದ್ದರೂ ಉಪಮನ್ಯು ಇನ್ನೂ ಪುಷ್ಟನಾಗಿ ಬೆಳೆಯುತ್ತಿರುವುದು ಕಂಡು ಧೌಮ್ಯ ಅದರ ಕಾರಣವನ್ನು ಕೇಳಿದ. "ಒಂದು ಸಲದ ಭಿಕ್ಷೆಯನು ಆಶ್ರಮಕ್ಕೆ ತಂದೊಪ್ಪಿಸಿದ ಮೇಲೆ ಪುನಃ ಬೇಡಿ ತಂದು ತಿನ್ನುತ್ತಿದ್ದೇನೆ" ಎಂದು ಉಪಮನ್ಯು. "ಹೀಗೆ ಎರಡೆರಡು ಸಲ ಬೇಡಿ ಜನರನ್ನು ಪೀಡಿಸಬಾರದು" ಎಂದು ಹೇಳಿದ ಧೌಮ್ಯ.

ಆ ಮಾತಿಗೆ ಉಪಮನ್ಯು ಒಪ್ಪಿಕೊಂಡ. ಆದರೆ ಇನ್ನಷ್ಟು ಮೈ ತುಂಬಿಕೊಂಡೇ ಬೆಳೆಯಲಾರಂಭಿಸಿದ. ಧೌಮ್ಯನು ಅವನನ್ನು ಪರೀಕ್ಷಿಸಿದಾಗ ಅವನು ಆಶ್ರಮದ ಒಂದು ಹಸುವಿನ ಹಾಲು ಹಿಂಡಿ ಕುಡಿಯುತ್ತಿರುವುದು ತಿಳಿಯಿತು. ಧೌಮ್ಯನು ಅವನನ್ನು ಖಂಡಿಸಿ, "ಗುರುವಿನ ಸೊತ್ತನ್ನು ಹೀಗೆ ಉಪಯೋಗಿಸುವುದು ಅಪರಾಧ" ಎಂದು ಹೇಳಿದ.

ಹಾಲು ಕುಡಿಯುವುದು ಬಿಟ್ಟರೂ ಉಪಮನ್ಯು ಸೊರಗಲಿಲ್ಲ. ಧೌಮ್ಯನು ಅವನನ್ನು ಪರೀಕ್ಷಿಸದೆ ಬಿಡಲಿಲ್ಲ. "ಆಶ್ರಮದ ಕರುಗಳು ತಾಯಿಯ ಮೊಲೆ ತಿಂದ ಬಳಿಕ ಬಾಯಿಂದ ಸುರಿಸುತ್ತಿರುವ ನೊರೆಯನ್ನು ನಾನು ಕುಡಿಯುತ್ತೇನೆ" ಎಂದ ಉಪಮನ್ಯು. "ಹಾಗೆ ಮಾಡಬಾರದಪ್ಪ. ತಿನ್ನುವವರಿದ್ದರೆ ಕರುಗಳು ಎಷ್ಟು ನೊರೆಗಳನ್ನಾದರೂ ಸುರಿಸುತ್ತವೆ" ಎಂದ ಧೌಮ್ಯ.

ಒಂದು ದಿನ ರಾತ್ರಿ ಪಶುಗಳು ತಾವಾಗಿ ಆಶ್ರಮಕ್ಕೆ ಹಿಂತಿರುಗಿದವು. ಆದರೆ ಉಪಮನ್ಯು ಬರಲಿಲ್ಲ. ಧೌಮ್ಯನು ಉಳಿದ ಶಿಷ್ಯರೊಂದಿಗೆ ಬೆಳಕು ಹಿಡಿದುಕೊಂಡು ಅವನನ್ನೇ ಕರೆಯುತ್ತಾ ಕಾಡಿನಲ್ಲಿ ಮುಂದೆ ಸಾಗಿದ. ಆಗ ಒಂದು ಹಾಳು ಬಾವಿಯಿಂದ "ಗುರುಗಳೇ ನಾನಿಲ್ಲಿದ್ದೇನೆ" ಎಂಬ ಉಪಮನ್ಯುವಿನ ಧ್ವನಿ ಕೇಳಿಸಿತು.

"ಉಪಮನ್ಯು! ಬಾವಿಗೆ ಹೇಗಪ್ಪಾ ಬಿದ್ದೆ?" ಧೌಮ್ಯನು ಕನಿಕರದಿಂದ ಕೇಳಿದ.

"ಹಸಿವು ತಾಳಲಾಗದೆ ಎಕ್ಕದ ಗಿಡದಿಂದ ಬರುವ ಹಾಲನ್ನು ಕುಡಿದುಬಿಟ್ಟೆ ಗುರುಗಳೇ. ಅದರಿಂದ ಕಣ್ಣುಗಳು ಕಾಣಿಸದೆ ಈ ಬಾವಿಗೆ ಬಿದ್ದುಬಿಟ್ಟೆ"

ಎಂದ. ಉಪಮನ್ಯು. ಆಗ ಧೌಮ್ಯನು ಅವನಿಗೆ ಅಶ್ವಿನೀ ದೇವತೆಗಳ ಮಂತ್ರವನ್ನು ಉಪದೇಶಿಸಿ, ಅದನ್ನು ಜಪಿಸಲು ಹೇಳಿದ. ಅದರ ಜಪದಿಂದ ಅಶ್ವಿನೀ ದೇವತೆಗಳು ಅವನ ದೂರ ಕಾಣಿಸಿಕೊಂಡು ಕಣ್ಣುಗಳನ್ನು ಕರುಣಿಸಿದರಲ್ಲದೆ ಸಕಲ ವಿದ್ಯೆಗಳೂ ಬರುವಂತಹ ಅಮೃತವನ್ನಿತ್ತು ಕುಡಿಯಲು ಹೇಳಿದರು. ಉಪಮನ್ಯು ಅದನ್ನು ಕುಡಿಯಲು ನಿರಾಕರಿಸಿ, ತನ್ನ ಗುರುವಿಗೆ ಕೊಡುವಂತೆ ಹೇಳಿದ. ಅವನ ಗುರುನಿಷ್ಠೆ ಕಂಡು ಧೌಮ್ಯನಿಗೆ ಸಂತೋಷವಾಯಿತು. "ಉಪಮನ್ಯು, ಆ ಅಮೃತವನ್ನು ನೀನೇ ಕುಡಿ. ಸಕಲ ವೇದಗಳೂ ನಿನಗೆ ಸಿದ್ಧಿಸಲಿ. ಎಲ್ಲಾ ಮಂತ್ರಗಳ ಆರಂಭದಲ್ಲಿ ನಿನ್ನ ಹೆಸರು ಬರುವಂತಾಗಲಿ'' ಎಂದು ಆಶೀರ್ವದಿಸಿದ.

ಮುಂದೆ ಉಪಮನ್ಯು ಪ್ರಸಿದ್ಧ ಋಷಿಯಾದ. ಮಹಾ ಶಿವಭಕ್ತನಾದ. ಆತ ಶಿವ ಸಹಸ್ರನಾಮಗಳನ್ನು ರಚಿಸಿದ. ಶಿವನ ಭಕ್ತ ಶಿರೋಮಣಿಗಳ ಜೀವನ ಚಿತ್ರಗಳಿರುವ 'ಶಿವಭಕ್ತ ವಿಲಾಸ' ಗ್ರಂಥ ಅವನಿಂದಲೇ ರಚಿಸಲ್ಪಟ್ಟಿತು.

## ನೂತನ ದಂಪತಿಗಳು ಸ್ವೀಕರಿಸುವ ಪಂಚಸೂತ್ರ ಪ್ರತಿಜ್ಞಾವಿಧಿ

ಶರಣಧರ್ಮದಲ್ಲಿ ಸಂಸಾರವು ತ್ಯಾಜ್ಯವಲ್ಲ ಅಧ್ಯಾತ್ಮ ಜೀವನದಲ್ಲಿ ಗೃಹಸ್ಥ ಜೀವನಕ್ಕೆ ಮಹತ್ತರವಾದ ಸ್ಥಾನವಿದೆ. ಅದು ಸುಂದರವೂ ಸರಳವೂ ಆದರೆ ಶಿವ ಯೋಗವಾಗುತ್ತದೆ. ಆ ಶಿವಯೋಗಕ್ಕೆ ವಿವಾಹ ಸಂದರ್ಭದಲ್ಲಿ ಕೈಗೊಳ್ಳುವ ಈ ನುಡಿಗಳೇ ಮೂಲ ಮಂತ್ರಗಳು.

1. ಬದುಕಿನ ಸುಖ-ದುಃಖಗಳಲ್ಲಿ ನಾವಿಬ್ಬರೂ ಪರಸ್ಪರ ಅರಿತುಕೊಂಡು ವಿರಸಕ್ಕೆ ಅವಕಾಶ ಕೊಡದಂತೆ ಸರಸವಾಗಿರುತ್ತೇವೆ.

2. ಗುರು-ಹಿರಿಯರಲ್ಲಿ ಗೌರವ ಭಾವನೆಯಿಟ್ಟುಕೊಂಡು ಆಶ್ರಿತರನ್ನು ಮರೆಯದೆ, ಅವಲಂಬಿತರನ್ನು ಉಪೇಕ್ಷಿಸದೆ ಸಭ್ಯ ಜೀವನವನ್ನು ಸಾಗಿಸುತ್ತೇವೆ.

3. ದುರ್ವ್ಯವಹಾರ-ದುಂದು ವೆಚ್ಚಗಳಿಗೆ ಮನಗೊಡದೆ ಸಜ್ಜನಿಕೆಯಿಂದ ಸಂಸಾರವನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತೇವೆ.

4. ದೀನದಲಿತರಲ್ಲಿ ಅನುಕಂಪ, ಭೋಗದಲ್ಲಿ ಸಂಯಮ, ದುಡಿಮೆಯಲ್ಲಿ ಶ್ರದ್ಧೆ-ಇವು ನಮ್ಮ ಜೀವನದ ಉಸಿರಾಗಿರುತ್ತದೆ.

5. ಕುಟುಂಬಕ್ಕಿಂತ ಗ್ರಾಮ, ಗ್ರಾಮಕ್ಕಿಂತ ರಾಜ್ಯ, ರಾಜ್ಯಕ್ಕಿಂತ ರಾಷ್ಟ್ರ ಮುಖ್ಯವೆಂಬುದನ್ನು ನಾವು ಎಂದಿಗೂ ಮರೆಯುವುದಿಲ್ಲ.

ಪರಿಶುದ್ಧ ಜೀವನವೇ ಪರಮ ಧ್ಯೇಯವೆಂದು ತಿಳಿದು ಮೇಲಿನ ಪಂಚ ಸೂತ್ರಗಳನ್ನು ಮನಃಪೂರ್ವಕವಾಗಿ ನಡೆ-ನುಡಿಗಳಿಂದ ಅನುಸರಿಸುತ್ತೇವೆಂದು ಈ ಮಂಗಳ ಸಭೆಯಲ್ಲಿ ಪ್ರತಿಜ್ಞೆ ಮಾಡುತ್ತೇವೆ. ಇದಕ್ಕಾಗಿ ಮಹಾಜನರ ಆಶೀರ್ವಾದ ಬೇಡುತ್ತೇವೆ.

(ಮೂಗುತಿಯಿಂದ)



# ಕೃಷಿ ಮತ್ತು ಸರಕಾರ

—ಡಿ. ವೆಂಕಟರಾವ್, ಎಂ.ಎ

ಸರಕಾರ ಜನತೆಯ ಹಿತಸಾಧನೆಗಾಗಿ, ಅವರ ಅಭಿವೃದ್ಧಿಗಾಗಿ ದುಡಿಯುವ ಒಂದು ಸಂಸ್ಥೆ. ಸರಕಾರದ ನೆರವಿಲ್ಲದೆಯೇ ಯಾವ ಕ್ಷೇತ್ರವೂ ಮುಂದುವರಿಯುವುದು ಕಷ್ಟ. ಕೃಷಿ ಕ್ಷೇತ್ರವೂ ಇದಕ್ಕೆ ಹೊರತಲ್ಲ. ಬಹಳ ಹಿಂದಿನಿಂದಲೂ ಪ್ರತಿಯೊಂದು ದೇಶದ ಸರಕಾರವೂ ಕೃಷಿ ಅಭಿವೃದ್ಧಿಯಲ್ಲಿ ಆಸಕ್ತಿ ವಹಿಸುತ್ತಾ ಬಂದಿದೆ. ಕೃಷಿ ಕ್ಷೇತ್ರದಲ್ಲಿ ಸರಕಾರದ ಪ್ರವೇಶ ಅತ್ಯಂತ ಮುಖ್ಯ ಹಾಗೂ ಅವಶ್ಯ ಎಂದು ಹಿಂದೆ ನಂಬಲಾಗಿತ್ತು. ಇಂದಿನ ದಿನಗಳಲ್ಲಿ ಈ ನಂಬಿಕೆ ಮತ್ತಷ್ಟು ಬಲಗೊಂಡಿದೆ. ಇಂದಿನ ಸರಕಾರದ ಕಾರ್ಯಕ್ಷೇತ್ರ ವಿಶಾಲವಾಗಿ ಬೆಳೆಯುತ್ತಿದೆ. ಪ್ರಜೆಗಳ ಕಲ್ಯಾಣವೇ ಇಂದಿನ ಸರಕಾರದ ಮುಖ್ಯಗುರಿ. ಜನತೆಯ ಹಿತವನ್ನು ಸಾಧಿಸುವುದರ ಮೂಲಕ ಸುಖೀ ರಾಜ್ಯದ ನಿರ್ಮಾಣ ಈಗಿನ ಸರಕಾರದ ಮುಖ್ಯಧ್ಯೇಯ. ಜನತೆಯ ಹಿತ ಸಾಧನೆಗೆ ಕೃಷಿಯನ್ನು ಅಭಿವೃದ್ಧಿಪಡಿಸುವುದು ಒಂದು ಉತ್ತಮ ಮಾರ್ಗ. ವಿಶ್ವದ ಬಹುತೇಕ ದೇಶಗಳು ಇಂದು ಕೃಷಿಯತ್ತ ಹೆಚ್ಚಿನ ಗಮನ ಹರಿಸಿವೆ. ವಿಶ್ವದ ಅನೇಕ ದೇಶಗಳಲ್ಲಿ ಕೃಷಿ ಕ್ಷೇತ್ರದಲ್ಲಿ ಸರಕಾರದ ಪ್ರವೇಶ ಅಗತ್ಯ ಎನ್ನುವುದಕ್ಕೆ ಹಲವಾರು ಕಾರಣಗಳಿವೆ.

1 ಕೃಷಿ ಸಾಮಾನ್ಯವಾಗಿ ಸಣ್ಣ ಗಾತ್ರದ ಉದ್ಯಮವಾಗಿದ್ದು, ಬೃಹತ್ ಗಾತ್ರದ ಉದ್ಯಮಕ್ಕೆ ಒದಗಿಬರುವ ಹಲವು ಸೌಲಭ್ಯಗಳನ್ನು ಸಣ್ಣ ರೈತ ಸಂಘಟಿಸಿಕೊಳ್ಳಲಾರ. ಬೃಹದ್ಗಾತ್ರದ ಮಧ್ಯವರ್ತಿಗಳೊಂದಿಗೆ ಚೌಕಾಶಿಮಾಡುವ ಸಾಮರ್ಥ್ಯವೂ ಸಣ್ಣ ರೈತನಿಗಾಗುವುದಿಲ್ಲ. ಈ ದೃಷ್ಟಿಯಿಂದ ಸರಕಾರದ ಮಧ್ಯಪ್ರವೇಶ ಅಗತ್ಯ.

2 ಕೃಷಿಕಾರ್ಯಗಳು ಮುಖ್ಯವಾಗಿ ನೆಲವನ್ನೇ ಅವಲಂಬಿಸಿವೆ. ಇದರಿಂದಾಗಿ ಭೂಹಿಡುವಳಿ ಹಾಗೂ ಉತ್ತರಾಧಿಕಾರದ ಕಾನೂನುಗಳು ಕೃಷಿಗೆ ಅತ್ಯಂತ ಮುಖ್ಯವೆನಿಸಿವೆ. ಸರಕಾರ ಇವೆರಡನ್ನೂ ನಿರ್ಣಯಿಸಬೇಕಾಗುತ್ತದೆ.

3 ಅಲ್ಪಾವಧಿಯಲ್ಲಿ ಕೃಷಿ ಉತ್ಪನ್ನಗಳ ಬೇಡಿಕೆಯಲ್ಲಿ ಏರಿಳಿತಗಳುಂಟಾದಾಗ ಅದಕ್ಕೆ ತಕ್ಕಂತೆ ಕೃಷಿ ಉತ್ಪನ್ನಗಳ ಪೂರೈಕೆಯಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಆದ್ದ

ರಿಂದ ಬೆಲೆಗಳೂ ಲಾಭಗಳೂ ಅಸ್ತವ್ಯಸ್ತಗೊಂಡು ರೈತ, ಗ್ರಾಹಕ ಅಥವಾ ಕೈಗಾರಿಕೆಗಳ ಮೇಲೆ ದುಷ್ಪರಿಣಾಮ ಉಂಟಾಗಬಹುದು. ಇದನ್ನು ತಡೆಗಟ್ಟಲು ಸರಕಾರ ಮಧ್ಯೆ ಪ್ರವೇಶಿಸಬೇಕಾಗುತ್ತದೆ.

ಸರಕಾರ ಇನ್ನೂ ಅನೇಕ ಬಗೆಯಲ್ಲಿ ಕೃಷಿ ಉತ್ಪಾದನಾ ಕಾರ್ಯದಲ್ಲಿ ಪ್ರವೇಶಿಸಬಹುದು. ಬೃಹತ್ ನೀರಾವರಿ, ಚರಂಡಿ ವ್ಯವಸ್ಥೆ ಇಂತಹ ಕಾರ್ಯಗಳಲ್ಲೂ ಸರಕಾರ ಪ್ರವೇಶಿಸಬೇಕಾಗುತ್ತದೆ. ಪಶುಗಳಿಗೋ ಅಥವಾ ಫಸಲಿಗೋ ಯಾವುದಾದರೂ ಸಾಂಕ್ರಾಮಿಕ ರೋಗ ತಗುಲಿದಾಗ ಅದರ ನಿವಾರಣೆಗೆ ಸಾರ್ವತ್ರಿಕವಾಗಿ ಕ್ರಮ ಕೈಗೊಳ್ಳಬೇಕಾಗುತ್ತದೆ. ಕೃಷಿಯ ದಕ್ಷತೆಯನ್ನು ಹೆಚ್ಚಿಸುವ ಉದ್ದೇಶದಿಂದ ಇಂತಹ ಕ್ರಮಗಳನ್ನು ಎಲ್ಲಾ ರೈತರೂ ಅನುಸರಿಸಬೇಕಾಗುತ್ತದೆ. ಇದನ್ನು ಜಾರಿಗೆ ತರುವುದು ಸರಕಾರದಿಂದ ಮಾತ್ರ ಸಾಧ್ಯ. ಆರ್ಥಿಕವಾಗಿ ಬಹಳ ದುರ್ಬಲರಾದ ರೈತರಿಗೆ ಆಧುನಿಕ ಕೃಷಿ ಉಪಕರಣಗಳನ್ನು, ರಾಸಾಯನಿಕ ಗೊಬ್ಬರಗಳನ್ನು ಕೊಳ್ಳಲು ಶಕ್ತಿ ಇರುವುದಿಲ್ಲ. ಸರಕಾರ ಪ್ರವೇಶಿಸಿ ಇವುಗಳನ್ನು ರೈತರಿಗೆ ಒದಗಿಸುವ ವ್ಯವಸ್ಥೆ ಮಾಡಬೇಕಾಗುತ್ತದೆ. ರೈತರು ಸಹಕಾರ ಸಂಘಗಳಿಂದ ಸಾಲ ಪಡೆಯುವುದು ಸಾಧ್ಯವಾಗುವಂತೆ ಅವುಗಳನ್ನು ಸಂಘಟಿಸಲು ಸರಕಾರ ನೆರವು ನೀಡಬೇಕಾಗುತ್ತದೆ. ಹೊಸ ಸಂಶೋಧನೆಗಳು, ಪ್ರಯೋಗಗಳು ಮತ್ತು ದೀರ್ಘಕಾಲದಲ್ಲಿ ಮಾತ್ರವೇ ಫಲಪ್ರದವಾಗುವ ಕ್ರಮಗಳ ಬಗ್ಗೆ ರೈತರಲ್ಲಿ ಜ್ಞಾನ ಪ್ರಸಾರ ಕೈಗೊಳ್ಳಲು ಸರಕಾರ ಮುಂದೆ ಬರಬೇಕಾಗುತ್ತದೆ.

**ಉತ್ಪಾದನೆಯಲ್ಲಿ ಪ್ರವೇಶ:** ಉತ್ಪಾದನೆಗೆ ನೇರವಾಗಿ ಸಂಬಂಧಿಸಿದಂತೆ ಸರಕಾರ ಹಲವು ಕ್ರಮಗಳನ್ನು ಜಾರಿಗೆ ತರಬೇಕಾಗುತ್ತದೆ. ಇವುಗಳಲ್ಲಿ ಮುಖ್ಯವಾದುವೆಂದರೆ ಜಮೀನಿನ ಒಡೆತನ ಮತ್ತು ಉತ್ತರಾಧಿಕಾರ. ದೇಶದಲ್ಲಿ ಆದಷ್ಟು ಹೆಚ್ಚು ಮಂದಿ ನೆಲದೊಡೆಯರು ಇರಬೇಕೆಂಬ ಉದ್ದೇಶದಿಂದ ಸರಕಾರ ಭೂಮಿಯನ್ನು ವ್ಯಾಪಕವಾಗಿ ಹಂಚಬಹುದು, ಜಮೀನು ಹಿಡುವಳಿಯ ಸ್ವರೂಪವನ್ನು ನಿಷ್ಕರ್ಷಿಸುವುದು, ಅದರ ಗರಿಷ್ಠ–ಕನಿಷ್ಠ ಮಿತಿಗಳನ್ನು ನಿರ್ಧರಿಸುವ ಹೊಣೆಯು ಸರಕಾರದ್ದು. ಜಮೀನು ಹಿಡುವಳಿಯನ್ನೇ ಅಲ್ಲದೆ ಸರಕಾರ ಗೇಣಿ ಪದ್ಧತಿಗಳನ್ನೂ ನಿಯಂತ್ರಣಗೊಳಿಸುತ್ತದೆ.

ಉತ್ಪಾದನೆಗೆ ನೇರವಾಗಿ ಸಂಬಂಧಿಸದಂತೆಯೂ ಸರಕಾರ ನಾನಾ ಕ್ರಮಗಳನ್ನು ಜಾರಿಗೆ ತರಬಹುದು. ಭೂಮಿಯ ಫಲವತ್ತತೆ ನಷ್ಟವಾಗದಂತೆ ಕೃಷಿ ಕಾರ್ಯ ನಡೆಯಲು ಸರಕಾರ ಕ್ರಮಗಳನ್ನು ಕೈಗೊಳ್ಳಬಹುದು. ಸಾರಿಗೆ ಸೌಲಭ್ಯದ ಬೆಳವಣಿಗೆಯಿಂದಲೋ ಅಥವಾ ನೀರಾವರಿ ಸೌಲಭ್ಯದಿಂದಲೋ ಒಂದು ಜಮೀನಿನ ಮೌಲ್ಯ



ಹೆಚ್ಚಿ, ಮಾಲೀಕ ಆ ಜಮೀನನ್ನು ಹಿಂದಿನ ಉದ್ದೇಶಕ್ಕೆ ಬದಲಾಗಿ ಬೇರೆ ಉದ್ದೇಶಕ್ಕೆ ಬಳಸಿದಾಗ ಸರಕಾರ ಮುಂದೆ ಬಂದು ಆ ಲಾಭ ಸಮಾಜಕ್ಕೆ ಲಭ್ಯವಾಗುವಂತೆ ಶುಲ್ಕ ವಿಧಿಸಬಹುದು. ನೆಲದ ಖಾಸಗಿ ಒಡೆಯರು ಸ್ವಂತ ಲಾಭದ ದೃಷ್ಟಿಯಿಂದ ದೀರ್ಘಕಾಲದ ಹಿತಗಳನ್ನು ಅಲಕ್ಷಿಸಿದಲ್ಲಿ ಅಥವಾ ಸಮಾಜದ ಅವಶ್ಯಕತೆಗಳನ್ನು ನಿರ್ಲಕ್ಷಿಸಿದಲ್ಲಿ ಸರಕಾರ ಮಧ್ಯೆ ಪ್ರವೇಶಿಸಿ ಅವರ ಮೇಲೆ ತೀವ್ರ ಕ್ರಮ ಕೈಗೊಳ್ಳಬೇಕಾಗುತ್ತದೆ. ರಾಷ್ಟ್ರಕ್ಕೆ ಅಗತ್ಯವೆನಿಸಿದ ಬೆಳೆಗಳನ್ನು ಬೆಳೆಯಲು ಸರಕಾರ ಪ್ರೋತ್ಸಾಹ ನೀಡಬಹುದು. ಒಂದು ಜಮೀನಿನ ಬೆಲೆ ಕೆಲವು ಬಾಹ್ಯ ಕಾರಣಗಳಿಂದಾಗಿ ಎಂದರೆ ಅದರ ಲಾಭ ಸಮಾಜಕ್ಕೆ ಒದಗುವಂತೆ ಸರಕಾರ ಕಾನೂನು ಮಾಡಬಹುದು.

**ಮಾರಾಟದಲ್ಲಿ ಪ್ರವೇಶ:** ಮಾರಾಟ ಕಾರ್ಯದಲ್ಲಿ ಅನೇಕ ಸಂದರ್ಭಗಳಲ್ಲಿ ಸರಕಾರದ ಪ್ರವೇಶ ಅಗತ್ಯ ಹಾಗೂ ಅನಿವಾರ್ಯವೆನಿಸುತ್ತದೆ. ಒಂದು ಉತ್ಪನ್ನದ ಪೂರೈಕೆಯಲ್ಲಿ ಕೊರತೆ ಇದ್ದಾಗ ಅದು ಗ್ರಾಹಕರಿಗೆ ನ್ಯಾಯವಾದ ಬೆಲೆಯಲ್ಲಿ, ತಾರತಮ್ಯವಿಲ್ಲದೆ ಹಂಚಿಕೆಯಾಗುವಂತೆ ಸರಕಾರ ಕ್ರಮ ಕೈಗೊಳ್ಳಬೇಕಾಗುತ್ತದೆ. ಈ ಸಂದರ್ಭದಲ್ಲಿ ಸರಕಾರ ಅನುಸರಿಸುವ ವಿಧಾನಗಳೆಂದರೆ ಬೆಲೆಗಳ ನಿಯಂತ್ರಣ ಮತ್ತು ಪಡಿತರ ವ್ಯವಸ್ಥೆ. ಉತ್ಪನ್ನವನ್ನೆಲ್ಲಾ ಸರಕಾರವೇ ನಿಗದಿಯಾದ ಬೆಲೆಗೆ ಕೊಂಡು ಅದನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಬಹುದು, ಇಲ್ಲವೇ ಚಿಲ್ಲರೆ ಮಾರಾಟಗಾರರು ನಿಗದಿಯಾದ ಪ್ರಮಾಣದಲ್ಲಿ ನ್ಯಾಯವಾದ ಬೆಲೆಗೆ ಮಾರುವಂತೆ ವ್ಯವಸ್ಥೆ ಮಾಡಬಹುದು. ಉತ್ಪನ್ನದ ಗುಣಮಟ್ಟದ ಆಧಾರದ ಮೇಲೆ ಸರಕಾರ ಬೆಲೆ ನಿಗದಿ ಮಾಡಬಹುದು. ಇದರಿಂದ ಉತ್ಪಾದಕರಿಗೆ ತಮ್ಮ ಉತ್ಪನ್ನಕ್ಕೆ ದೊರೆಯುವ ಬೆಲೆಯ ಬಗ್ಗೆ ಹಾಗೂ ಗ್ರಾಹಕರಿಗೆ ತಾವು ಕೊಳ್ಳುವ ಸರಕಿಗೆ ಕೊಡಬೇಕಾದ ಬೆಲೆಯ ಬಗ್ಗೆ ಖಚಿತವಾಗಿ ಗೊತ್ತಿರುತ್ತದೆ. ಮಧ್ಯವರ್ತಿಗಳು ರೈತರಿಂದ ಉತ್ಪನ್ನವನ್ನೆಲ್ಲಾ ಸಂಗ್ರಹಿಸಿ ಬೆಲೆ ಏರಿಕೆಯನ್ನು ತಂದೊಡ್ಡಿದಾಗ ಸರಕಾರ ಮಧ್ಯೆ ಪ್ರವೇಶಿಸಿ ಉತ್ಪಾದಕರಿಗೆ ನ್ಯಾಯಬೆಲೆ ದೊರೆಯುವಂತೆಯೂ, ಗ್ರಾಹಕರು ಹೆಚ್ಚು ಬೆಲೆ ಕೊಡದಿರುವಂತೆಯೂ ಕ್ರಮ ಕೈಗೊಳ್ಳಬೇಕಾಗುತ್ತದೆ. ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡಬೇಕಾಗುತ್ತದೆ. ಉತ್ಪಾದನಾ ಸಾಧನಗಳು ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೂ, ಒಂದು ಉತ್ಪನ್ನದಿಂದ ಇನ್ನೊಂದು ಉತ್ಪನ್ನಕ್ಕೂ ಚಲಿಸುವಂತೆ ಸರಕಾರ ಪ್ರಯತ್ನಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಸರಕಾರ ಕೈಗೊಳ್ಳಬಹುದಾದ ಕೆಲವು ಕ್ರಮಗಳೆಂದರೆ, ಕೈಗಾರಿಕೆಗೆ ಅವಶ್ಯಕವಾದ ಕಚ್ಚಾ ಸಾಮಗ್ರಿಯನ್ನು ಹೆಚ್ಚಾಗಿ ಬೆಳೆಯುವಂತೆ ನೆರವು ನೀಡುವುದು, ಯಾವುದೋ ಒಂದು ಆಹಾರಧಾನ್ಯದ ಬೆಳೆಗೆ ಅಧಿಕ ಪ್ರೋತ್ಸಾಹ ನೀಡುವುದು, ಕೃಷಿಯನ್ನೇ ನಂಬಿದವರಿಗೆ ಇತರ ಉದ್ಯೋಗಗಳನ್ನೊದಗಿಸಿ ಅವರನ್ನು ಅವುಗಳತ್ತ ಚಲಿಸುವಂತೆ ಮಾಡುವುದು, ಮುಂತಾದುವು. ಬೆಲೆಗಳು ಅತಿಯಾಗಿ ಏರಿದಾಗ ರೈತರು ನಿಗದಿಯಾದ ಬೆಲೆಗಳಲ್ಲಿ ಕಡ್ಡಾಯವಾಗಿ

ತಮ್ಮ ಉತ್ಪನ್ನವನ್ನು ಸಲ್ಲಿಸುವಂತೆ ಸರಕಾರ ಕಾಯಿದೆ ಮಾಡಬಹುದು. ಬೆಲೆಗಳು ಅತಿಯಾಗಿ ಇಳಿಯದಂತೆ ಕನಿಷ್ಠ ಬೆಲೆಗಳನ್ನು ನಿರ್ಧರಿಸಬಹುದು. ರೈತರಿಗೆ ಧನ ಸಹಾಯ, ಕೃಷಿಕಾರ್ಮಿಕರಿಗೆ ಕನಿಷ್ಠ ಕೂಲಿ ನಿಗದಿ, ಹೆಚ್ಚು ಉತ್ಪಾದನೆ ಮಾಡುವ ರೈತರಿಗೆ ನಗದು ಬಹುಮಾನ ನೀಡಿಕೆ, ಸ್ವದೇಶಿ ಉತ್ಪನ್ನಕ್ಕೆ ಉತ್ತೇಜನ ಕೊಡುವ ದೃಷ್ಟಿಯಿಂದ ಅದರ ಆಮದಿನ ನಿರ್ಬಂಧ, ರಫ್ತಿಗೆ ನೆರವು, ಕೃಷಿ ಅಭಿವೃದ್ಧಿ ಯೋಜನೆ ಮೊದಲಾದ ನಾನಾ ವಿಧಗಳಿಂದ ಸರಕಾರ ಕೃಷಿಯಲ್ಲಿ ಆಸಕ್ತಿವಹಿಸುವುದುಂಟು.

ಭಾರತದಂತಹ ಅಭಿವೃದ್ಧಿಶೀಲರಾಷ್ಟ್ರಗಳಲ್ಲಿ ಸರಕಾರದ ನೆರವಿಲ್ಲದೆ ಕೃಷಿ ಕ್ಷೇತ್ರ ಬದುಕುವಂತೆಯೇ ಇಲ್ಲ. ಭಾರತದಲ್ಲಂತೂ ಕೃಷಿಯಲ್ಲಿ ಸರಕಾರದ ಮಧ್ಯ ಪ್ರವೇಶ ಅತ್ಯಂತ ಅವಶ್ಯಕವೆನಿಸಿದೆ. ಇದಕ್ಕೆ ಕಾರಣಗಳೆಂದರೆ–

ಕೃಷಿ ಪ್ರಕೃತಿಯ ಕೈಗೊಂಬೆಯಾಗಿದ್ದು, ಅದು ಮಳೆಯೊಂದಿಗೆ ನಿರಂತರವಾಗಿ ಜೂಜಾಟ ನಡಸಬೇಕಾಗುತ್ತದೆ. ಪ್ರಕೃತಿಯ ಪ್ರಕೋಪದಿಂದ ಉಂಟಾಗುವ ಅಸ್ಥಿರತೆ, ಆಘಾತಗಳನ್ನು ಕೃಷಿ ಎದುರಿಸಬೇಕಾಗುತ್ತದೆ. ಭಾರತದಲ್ಲಿ ಕೃಷಿ ಇಂದಿಗೂ ಹಿಂದುಳಿದ ಕೈಗಾರಿಕೆ ಎನಿಸಿದೆ. ಇಲ್ಲಿಯ ಕೃಷಿ ಉತ್ಪಾದನೆ ವ್ಯವಸ್ಥೆಯಲ್ಲಿ ಸರಕಾರ ಮಾತ್ರವೇ ಸ್ಥಿರತೆಯನ್ನು ತರಬಲ್ಲದು. ಭಾರತದಲ್ಲಿ ಕೃಷಿಯನ್ನು ಅವಲಂಬಿಸಿರುವವರ ಪ್ರಮಾಣ ಅತಿ ಹೆಚ್ಚು. ಕೃಷಿಯ ಮೇಲಿನ ಒತ್ತಡವನ್ನು ಕಡಮೆಮಾಡಬೇಕಾದರೆ ಹೆಚ್ಚುವರಿಯಾಗುವ ಕೃಷಿ ಕಾರ್ಮಿಕರನ್ನು ಇತರೆ ಉದ್ಯೋಗಗಳಲ್ಲಿ ನೆಲೆಗೊಳಿಸಬೇಕಾಗುತ್ತದೆ. ಇದಕ್ಕಾಗಿ ಸರಕಾರದ ಪ್ರವೇಶ ಅಗತ್ಯ. ಭಾರತದ ಕೃಷಿ ಸಂಘಟನೆ ಮತ್ತು ಕೃಷಿವ್ಯವಸ್ಥೆ ತುಂಬ ಅಸಮರ್ಪಕವೆನಿಸಿದೆ. ಅವ್ಯವಸ್ಥೆಯಿಂದ ಕೂಡಿರುವ ಜಮೀನು ಹಿಡುವಳಿ, ಗೇಣಿ ಪದ್ಧತಿ, ಮಾರಾಟ ಮುಂತಾದುವನ್ನು ಸರಿಪಡಿಸಲು ಸರಕಾರ ಮುಂದೆ ಬರಬೇಕಾಗುತ್ತದೆ. ಇದರ ಜೊತೆಗೆ ಮಧ್ಯವರ್ತಿಗಳು, ಸಾಲಿಗರು ಮಾರುಕಟ್ಟೆಯ ಏರಿಳಿತಗಳು ಇವೆಲ್ಲವೂ ಭಾರತದಲ್ಲಿ ಸರಕಾರದ ಪ್ರವೇಶ ಅತ್ಯಗತ್ಯವೆನಿಸುವಂತೆ ಮಾಡಿವೆ. ಭಾರತದ ರೈತ ಅಜ್ಞಾನಿ, ಅನಕ್ಷರಸ್ಥ, ಅವನಿಗೆ ಆಧುನಿಕ ಕೃಷಿ ವಿಧಾನಗಳ ಬಗ್ಗೆ ತಿಳಿದಿರುವುದಿಲ್ಲ, ಮಾರುಕಟ್ಟೆಯ ಪ್ರವೃತ್ತಿಗಳ ಬಗ್ಗೆ ಅವನು ತುಂಬ ಅಮಾಯಕ. ಇದೇ ಸ್ಥಿತಿಯಲ್ಲಿ ಅವನನ್ನು ಮುಂದುವರಿಯಲು ಬಿಟ್ಟರೆ ಭಾರತದ ಉದ್ಧಾರ ಅಸಾಧ್ಯ. ಈ ದೃಷ್ಟಿಯಿಂದ ಭಾರತದ ಕೃಷಿಯಲ್ಲಿ ಸರಕಾರದ ಪಾತ್ರ ಅತಿಮಹತ್ವದ್ದಾಗಿದೆ.

ಭಾರತದ ಕೃಷಿ ಮಳೆಯನ್ನು ಅವಲಂಬಿಸಿದೆ. ಈ ಪರಿಸ್ಥಿಯನ್ನು ತಪ್ಪಿಸಲು ನೀರಾವರಿ ಸೌಲಭ್ಯಗಳನ್ನು ವಿಸ್ತರಿಸಬೇಕಾಗುತ್ತದೆ. ಈ ದಿಸೆಯಲ್ಲಿ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರಲು ಸರಕಾರದ ಪ್ರವೇಶ ಅಗತ್ಯ. ಎಷ್ಟೋ ಅಭಿವೃ



ದ್ಧಿಯೋಜನೆಗಳನ್ನು ಜಾರಿಗೆತಂದರೂ ಅವುಗಳಲ್ಲಿ ರೈತರಿಗೆ ನಂಬಿಕೆ ಬಂದ ಹೊರತು ಕೃಷಿ ಅಭಿವೃದ್ಧಿ ಸಾಧ್ಯವಿಲ್ಲ. ಮಿಶ್ರಬೇಸಾಯ ಹೊಸತಳಿಗಳು ಮತ್ತು ರಾಸಾಯನಿಕ ಗೊಬ್ಬರಗಳ ಬಳಕೆ, ಸುಧಾರಿತ ಬೇಸಾಯದ ವಿಧಾನ ಇತ್ಯಾದಿಗಳಲ್ಲಿ ರೈತರಿಗೆ ನಂಬಿಕೆಯನ್ನು ಮೂಡಿಸಬೇಕಾಗುತ್ತದೆ. ಇದು ಸರಕಾರದಿಂದ ಮಾತ್ರ ಸಾಧ್ಯ.

ಸರಕಾರದ ನೀತಿ ಮತ್ತು ಕಾರ್ಯಗಳು ಕೃಷಿಉತ್ಪಾದನೆಯ ಮೇಲೆ ಗಮನಾರ್ಹ ಪರಿಣಾಮ ಬೀರುತ್ತವೆ. ಸರಕಾರದ ನೀತಿಗಳು ಮತ್ತು ಕಾರ್ಯಗಳು ಅನೇಕ ಬಗೆಯಾಗಿರುತ್ತವೆ ಸರಕಾರದ ನೀತಿಗಳಲ್ಲಿ ಸುಧಾರಣೆಗಳು ತೆರಿಗೆ ವಿದೇಶಿ ವಿನಿಮಯ, ಸುಂಕಗಳು, ಸ್ವದೇಶಿ ಬೆಲೆಗಳು, ಸಾರ್ವಜನಿಕ ಬಂಡವಾಳ ತೊಡಗಿಸುವಿಕೆಗಳು ಸೇರಿರುತ್ತವೆ. ಸರಕಾರದ ಕಾರ್ಯಗಳಲ್ಲಿ ವಿದ್ಯಾಭ್ಯಾಸದ ಕಾರ್ಯಕ್ರಮಗಳು, ಸಂಶೋಧನೆ, ಸಾಲ, ಮಾರುಕಟ್ಟೆ ನಿಯಂತ್ರಣ, ಭೂಮಿಯ ಅಭಿವೃದ್ಧಿ, ಸಾರಿಗೆ ಸೌಲಭ್ಯಗಳನ್ನು ಒದಗಿಸುವಿಕೆಗಳು ಸೇರಿರುತ್ತವೆ. ಹೀಗೆ ನಾನಾ ಕಾರಣಗಳಿಂದ ಭಾರತದ ಕೃಷಿಯಲ್ಲಿ ಸರಕಾರದ ಸ್ಥಾನ ಉನ್ನತ ಮಟ್ಟದ್ದಾಗಿದೆ.

ಇಂದು ನಾವು ಯೋಜನಾ ಪಥದಲ್ಲಿ ಬಹುದೂರಸಾಗಿ ಬಂದಿದ್ದೇವೆ. ಯೋಜನೆಗಳಲ್ಲಿ ಕೃಷಿ ಸುಧಾರಣೆ ಮತ್ತು ಅಭಿವೃದ್ಧಿಗಾಗಿ ಸರಕಾರ ಅನೇಕ ದಿಕ್ಕುಗಳಲ್ಲಿ ಪ್ರಯತ್ನಿಸುತ್ತದೆ. ಯೋಜನೆಗಳ ಮೂಲಕ ಆಹಾರೋತ್ಪಾದನೆ ಹೆಚ್ಚಿರುವುದರಿಂದ ದೇಶದ ಕೃಷಿರಂಗದಲ್ಲಿ ನವಚೈತನ್ಯ ಮೂಡಿದೆ. ಅಧಿಕ ಇಳುವರಿಯ ಹೊಸತಳಿಗಳು ರೈತರನ್ನು ಆಕರ್ಷಿಸಿವೆ ಹಳೆಯ ಸಂಪ್ರದಾಯಗಳಲ್ಲಿ ನಡೆಸುತ್ತಿದ್ದ ಕೃಷಿಯಲ್ಲಿ ಇಂದು ಸುಧಾರಣೆಯ ಗಾಳಿ ಬೀಸಿದೆ. ಕೃಷಿ ಇಂದು ಒಂದು ದೊಡ್ಡ ಉದ್ಯಮವಾಗಿ ರೂಪುಗೊಳ್ಳುತ್ತಿದೆ. ಭಾರತೀಯ ಕೃಷಿಯ ಅತ್ಯಂತ ತೃಪ್ತಿಕರ ಸ್ಥಿತಿಯನ್ನು ಇದು ಸೂಚಿಸುತ್ತದೆ. ಈಗ ಸಧ್ಯದಲ್ಲಿ ಇರುವ ಅನೇಕ ರೀತಿಯ ಹಾಗೂ ಹೊಸ ಕಾರ್ಯಕ್ರಮಗಳು ಅನುಷ್ಠಾನದಿಂದ ತನ್ನ ಮಾರುಕಟ್ಟೆಗಳ ಬೇಡಿಕೆಯನ್ನಷ್ಟೇ ಈಡೇರಿಸುವುದಲ್ಲದೆ ಅಂತರ ರಾಷ್ಟ್ರೀಯ ಮಾರುಕಟ್ಟೆಗಳಿಗೂ ಸರಬರಾಜುಮಾಡುವ ಸ್ಥಿತಿಯನ್ನು ಭಾರತ ಮುಟ್ಟುತ್ತಿದೆ. ದೇಶದ ಕೃಷಿಯಲ್ಲಿ ಈಗಾಗಲೇ ಭದ್ರವೈಜ್ಞಾನಿಕ ಸಾಮರ್ಥ್ಯವನ್ನು ಸೃಷ್ಟಿಸಲಾಗಿದೆ. ಹಾಗೂ ಇದನ್ನು ಗ್ರಾಮೀಣ ಪ್ರದೇಶಗಳಿಗೆ ಮುಟ್ಟಿಸಲು ಅಭಿವೃದ್ಧಿ ತಂತ್ರ ಅಗತ್ಯ ಸಾಧನಗಳನ್ನು ರೂಪಿಸಲಾಗುತ್ತಿದೆ. ಕೃಷಿ ಬೆಳವಣಿಗೆಯ ಗತಿಯನ್ನು ಮುಂದೆ ಮತ್ತಷ್ಟು ತೀವ್ರಗೊಳಿಸಲು ಸರಕಾರ ಪ್ರಯತ್ನಿಸುತ್ತದೆ.

ಇಂದು ಭಾರತದಲ್ಲಿ ಕೃಷಿ ಇಲಾಖೆಗಳು ವ್ಯಾಪಕವಾಗಿ ಬೆಳೆದಿವೆ. ವಿವಿಧ ಮಾರುಕಟ್ಟೆಗಳಲ್ಲಿನ ಬೆಲೆಗಳ ಸಮೀಕರಣ ಮತ್ತು ಅವುಗಳ ಸ್ಥಿರತೆಯ ಸ್ಥಾಪನೆ

ಇವುಗಳಿಂದಾಗಿ ಭಾರತದಲ್ಲಿ ಉತ್ಪನ್ನ ವಿನಿಮಯ ಕೇಂದ್ರವನ್ನು ಸ್ಥಾಪಿಸಲಾಗಿದೆ. ಶಿಷ್ಟೀಕರಣ, ಶ್ರೇಣೀಕರಣ, ಮಾರುಕಟ್ಟೆಯ ಸ್ಥಳ, ಪೇಟೆ ಪ್ರವೃತ್ತಿಗಳನ್ನು ಕುರಿತು ಸುದ್ದಿ ಪ್ರಕಟಣೆ ಇತ್ಯಾದಿ ಸೌಲಭ್ಯಗಳನ್ನು ಈ ಕೇಂದ್ರ ಒದಗಿಸುತ್ತದೆ. ಬೆಲೆಗಳ ಏರಿಳಿತಗಳ ನಷ್ಟ ಸಂಭವಗಳಿಗೆ ರಕ್ಷಣೆಯನ್ನು ಈ ಕೇಂದ್ರ ಕೊಡುತ್ತದೆ. ಆಹಾರ ಧಾನ್ಯಗಳು, ಹತ್ತಿ, ಸೆಣಬು ಎಣ್ಣೇಬೀಜಗಳು ಮುಂತಾದವು ಈ ಕೇಂದ್ರಗಳಲ್ಲಿ ಮುಖ್ಯವಾಗಿ ವಹಿವಾಟಿಗೆ ಒಳಪಡುವ ಪದಾರ್ಥಗಳಾಗಿದ್ದು ಇವು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸೇರಿವೆ ಕೃಷಿ ಉತ್ಪನ್ನ ವಿನಿಮಯ ಕೇಂದ್ರದ ವೈಶಿಷ್ಟ್ಯವೆಂದರೆ, ಒಂದು ಪದಾರ್ಥಕ್ಕೆ ಸಿದ್ಧವಾದ, ನಿರಂತರವಾದ ಮತ್ತು ತತ್ಕ್ಷಣದಲ್ಲಿ ಸರಕನ್ನು ಹಣಕ್ಕೆ ಪರಿವರ್ತಿಸಿಕೊಳ್ಳಬಹುದಾದ ಮಾರುಕಟ್ಟೆಯನ್ನು ಒದಗಿಸುವುದು.

ನಮ್ಮ ದೇಶದಲ್ಲಿ ಸರಕಾರಿ ಕ್ಷೇತ್ರದಲ್ಲಿ ಉಗ್ರಾಣಗಳನ್ನು ಸ್ಥಾಪಿಸಲಾಗಿದ್ದು ರಾಷ್ಟ್ರಮಟ್ಟದಲ್ಲಿ ಉಗ್ರಾಣ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಈ ಸಂಸ್ಥೆಗಳು ದೇಶಾದ್ಯಂತ ಸುಮಾರು 744 ಉಗ್ರಾಣಗಳನ್ನು ಸ್ಥಾಪಿಸಿವೆ. ಈ ಉಗ್ರಾಣಗಳ ಒಟ್ಟು ದಾಸ್ತಾನು ಸಾಮರ್ಥ್ಯ 34.6 ಲಕ್ಷಟನ್‌ಗಳಷ್ಟಾಗಿದೆ. ದಾಸ್ತಾನುಗಾರರು ಉಗ್ರಾಣಗಳಿಗೆ ಸರಕುಗಳನ್ನು ತಂದೊಡನೆಯೇ, ಅದನ್ನು ಪರೀಕ್ಷಿಸಿ, ವರ್ಗೀಕರಿಸಿ ತೂಕಮಾಡಲಾಗುತ್ತದೆ. ನಂತರ ಚೀಲಗಳನ್ನು ಮತ್ತು ಪಾಲಿಥಿನ್‌ಷೀಟ್, ಚಾಪೆಗಳ ಮೇಲೆ ಇಲ್ಲವೆ ಮಂದ ಚೌಕಟ್ಟುಗಳ ಮೇಲೆ ಅಚ್ಚುಕಟ್ಟಾಗಿ ಇಡಲಾಗುತ್ತದೆ. ಸರಕಿಗೆ ಹುಳು ಹುಪ್ಪಟೆ ಬೀಳದಂತೆ ನೋಡಿಕೊಳ್ಳಲು ಅಗತ್ಯವಾದ ಕೀಟನಾಶಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಇಂತಹ ಕ್ರಮಗಳಲ್ಲಿ ಮುಖ್ಯವಾದುವು ಪುಡಿಉದುರಿಸುವುದು, ಸಿಂಪಾಡಿಸುವುದು ಮತ್ತು ಹೊಗೆಯಾಡಿಸುವುದು. ಇಲಿ-ಹೆಗ್ಗಣಗಳಕಾಟವನ್ನು ತಪ್ಪಿಸಲು ಮೂಶಕ ನಾಶಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಉಗ್ರಾಣದಲ್ಲಿ ಸರಕನ್ನು ದಾಸ್ತಾನುಮಾಡುವವರಿಗೆ, ಉಗ್ರಾಣಕ ನೀತಿಯನ್ನು ಕೊಡಲಾಗುತ್ತದೆ, ಆದರ ಆಧಾರದ ಮೇಲೆ ಅನುಸೂಚಿಕ ಬ್ಯಾಂಕುಗಳು ಸರಕಿನ ಮೌಲ್ಯದ ಶೇಕಡ 50ರಿಂದ 60ರವರೆಗೆ ಸಾಲವನ್ನು ಮುಂಗಡವಾಗಿ ನೀಡುತ್ತವೆ. ದಾಸ್ತಾನುಗಾರರು ಈಹಣವನ್ನು ತಮ್ಮ ವ್ಯವಸಾಯ ವ್ಯಾಪಾರಗಳಲ್ಲಿ ಹೂಡಿ ಅಧಿಕ ಲಾಭಗಳಿಸಬಹುದು. ದೇಶದಲ್ಲಿ ಕೃಷಿ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದು ಹಾಗೂ ರೈತರಿಗೆ ಮತ್ತು ಬಳಕೆದಾರರಿಗೆ ಸರಿ ಹೊಂದುವ ನೀತಿಯನ್ನು ರೂಪಿಸುವುದು ಕೇಂದ್ರ ಸರಕಾರದ ಸಂಸ್ಥೆಗಳ ಮುಖ್ಯ ಉದ್ದೇಶ. ಈ ದಿಸೆಯಲ್ಲಿ ಕೃಷಿ ಮಂತ್ರಿ ಶಾಖೆಗೆ ನೇರವಾಗಿ ಸಂಬಂಧಿಸಿದಂತೆ ಏಳು ಬೃಹತ್ ಸಂಸ್ಥೆಗಳು ಕಾರ್ಯನಿರ್ವಹಿಸುತ್ತವೆ.



ಹೆಚ್ಚಿ, ಮಾಲೀಕ ಆ ಜಮೀನನ್ನು ಹಿಂದಿನ ಉದ್ದೇಶಕ್ಕೆ ಬದಲಾಗಿ ಬೇರೆ ಉದ್ದೇಶಕ್ಕೆ ಬಳಸಿದಾಗ ಸರಕಾರ ಮುಂದೆ ಬಂದು ಆ ಲಾಭ ಸಮಾಜಕ್ಕೆ ಲಭ್ಯವಾಗುವಂತೆ ಶುಲ್ಕ ವಿಧಿಸಬಹುದು. ನೆಲದ ಖಾಸಗಿ ಒಡೆಯರು ಸ್ವಂತ ಲಾಭದ ದೃಷ್ಟಿಯಿಂದ ದೀರ್ಘಕಾಲದ ಹಿತಗಳನ್ನು ಅಲಕ್ಷಿಸಿದಲ್ಲಿ ಅಥವಾ ಸಮಾಜದ ಅವಶ್ಯಕತೆಗಳನ್ನು ನಿರ್ಲಕ್ಷಿಸಿದಲ್ಲಿ ಸರಕಾರ ಮಧ್ಯೆ ಪ್ರವೇಶಿಸಿ ಅವರ ಮೇಲೆ ತೀವ್ರ ಕ್ರಮ ಕೈಗೊಳ್ಳಬೇಕಾಗುತ್ತದೆ. ರಾಷ್ಟ್ರಕ್ಕೆ ಅಗತ್ಯವೆನಿಸಿದ ಬೆಳೆಗಳನ್ನು ಬೆಳೆಯಲು ಸರಕಾರ ಪ್ರೋತ್ಸಾಹ ನೀಡಬಹುದು. ಒಂದು ಜಮೀನಿನ ಬೆಲೆ ಕೆಲವು ಬಾಹ್ಯ ಕಾರಣಗಳಿಂದಾಗಿ ಏರಿದರೆ ಅದರ ಲಾಭ ಸಮಾಜಕ್ಕೆ ಒದಗುವಂತೆ ಸರಕಾರ ಕಾನೂನು ಮಾಡಬಹುದು.

**ಮಾರಾಟದಲ್ಲಿ ಪ್ರವೇಶ:** ಮಾರಾಟ ಕಾರ್ಯದಲ್ಲಿ ಅನೇಕ ಸಂದರ್ಭಗಳಲ್ಲಿ ಸರಕಾರದ ಪ್ರವೇಶ ಅಗತ್ಯ ಹಾಗೂ ಅನಿವಾರ್ಯವೆನಿಸುತ್ತದೆ. ಒಂದು ಉತ್ಪನ್ನದ ಪೂರೈಕೆಯಲ್ಲಿ ಕೊರತೆ ಇದ್ದಾಗ ಅದು ಗ್ರಾಹಕರಿಗೆ ನ್ಯಾಯವಾದ ಬೆಲೆಯಲ್ಲಿ, ತಾರತಮ್ಯವಿಲ್ಲದೆ ಹಂಚಿಕೆಯಾಗುವಂತೆ ಸರಕಾರ ಕ್ರಮ ಕೈಗೊಳ್ಳಬೇಕಾಗುತ್ತದೆ. ಈ ಸಂದರ್ಭದಲ್ಲಿ ಸರಕಾರ ಅನುಸರಿಸುವ ವಿಧಾನಗಳೆಂದರೆ ಬೆಲೆಗಳ ನಿಯಂತ್ರಣ ಮತ್ತು ಪಡಿತರ ವ್ಯವಸ್ಥೆ. ಉತ್ಪನ್ನವನ್ನೆಲ್ಲಾ ಸರಕಾರವೇ ನಿಗದಿಯಾದ ಬೆಲೆಗೆ ಕೊಂಡು ಅದನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಬಹುದು. ಇಲ್ಲವೇ ಚಿಲ್ಲರೆ ಮಾರಾಟಗಾರರು ನಿಗದಿಯಾದ ಪ್ರಮಾಣದಲ್ಲಿ ನ್ಯಾಯವಾದ ಬೆಲೆಗೆ ಮಾರುವಂತೆ ವ್ಯವಸ್ಥೆ ಮಾಡಬಹುದು. ಉತ್ಪನ್ನದ ಗುಣಮಟ್ಟದ ಆಧಾರದ ಮೇಲೆ ಸರಕಾರ ಬೆಲೆ ನಿಗದಿ ಮಾಡಬಹುದು. ಇದರಿಂದ ಉತ್ಪಾದಕರಿಗೆ ತಮ್ಮ ಉತ್ಪನ್ನಕ್ಕೆ ದೊರೆಯುವ ಬೆಲೆಯ ಬಗ್ಗೆ ಹಾಗೂ ಗ್ರಾಹಕರಿಗೆ ತಾವು ಕೊಳ್ಳುವ ಸರಕಿಗೆ ಕೊಡಬೇಕಾದ ಬೆಲೆಯ ಬಗ್ಗೆ ಖಚಿತವಾಗಿ ಗೊತ್ತಿರುತ್ತದೆ. ಮಧ್ಯವರ್ತಿಗಳು ರೈತರಿಂದ ಉತ್ಪನ್ನವನ್ನೆಲ್ಲಾ ಸಂಗ್ರಹಿಸಿ ಬೆಲೆ ಏರಿಕೆಯನ್ನು ತಂದೊಡ್ಡಿದಾಗ ಸರಕಾರ ಮಧ್ಯೆ ಪ್ರವೇಶಿಸಿ ಉತ್ಪಾದಕರಿಗೆ ನ್ಯಾಯಬೆಲೆ ದೊರೆಯುವಂತೆಯೂ, ಗ್ರಾಹಕರು ಹೆಚ್ಚು ಬೆಲೆ ಕೊಡದಿರುವಂತೆಯೂ ಕ್ರಮ ಕೈಗೊಳ್ಳಬೇಕಾಗುತ್ತದೆ. ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಲು ಪ್ರೋತ್ಸಾಹ ನೀಡಬೇಕಾಗುತ್ತದೆ. ಉತ್ಪಾದನಾ ಸಾಧನೆಗಳು ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೂ, ಒಂದು ಉತ್ಪನ್ನದಿಂದ ಇನ್ನೊಂದು ಉತ್ಪನ್ನಕ್ಕೂ, ಚಲಿಸುವಂತೆ ಸರಕಾರ ಪ್ರಯತ್ನಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಸರಕಾರ ಕೈಗೊಳ್ಳಬಹುದಾದ ಕೆಲವು ಕ್ರಮಗಳೆಂದರೆ, ಕೈಗಾರಿಕೆಗೆ ಆವಶ್ಯಕವಾದ ಕಚ್ಚಾ ಸಾಮಗ್ರಿಯನ್ನು ಹೆಚ್ಚಾಗಿ ಬೆಳೆಯುವಂತೆ ನೆರವು ನೀಡುವುದು, ಯಾವುದೋ ಒಂದು ಆಹಾರಧಾನ್ಯದ ಬೆಳೆಗೆ ಅಧಿಕ ಪ್ರೋತ್ಸಾಹ ನೀಡುವುದು, ಕೃಷಿಯನ್ನೇ ನಂಬಿದವರಿಗೆ ಇತರ ಉದ್ಯೋಗಗಳನ್ನೊದಗಿಸಿ ಅವರನ್ನು ಅವುಗಳತ್ತ ಚಲಿಸುವಂತೆ ಮಾಡುವುದು, ಮುಂತಾದುವು. ಬೆಲೆಗಳು ಅತಿಯಾಗಿ ಏರಿದಾಗ ರೈತರು ನಿಗದಿಯಾದ ಬೆಲೆಗಳಲ್ಲಿ ಕಡ್ಡಾಯವಾಗಿ

ತಮ್ಮ ಉತ್ಪನ್ನವನ್ನು ಸಲ್ಲಿಸುವಂತೆ ಸರಕಾರ ಕಾಯ್ದಿದೆ ಮಾಡಬಹುದು. ಬೆಲೆಗಳು ಅತಿಯಾಗಿ ಇಳಿಯದಂತೆ ಕನಿಷ್ಠ ಬೆಲೆಗಳನ್ನು ನಿರ್ಧರಿಸಬಹುದು. ರೈತರಿಗೆ ಧನ ಸಹಾಯ, ಕೃಷಿಕಾರ್ಮಿಕರಿಗೆ ಕನಿಷ್ಠ ಕೂಲಿ ನಿಗದಿ, ಹೆಚ್ಚು ಉತ್ಪಾದನೆ ಮಾಡುವ ರೈತರಿಗೆ ನಗದು ಬಹುಮಾನ ನೀಡಿಕೆ, ಸ್ವದೇಶಿ ಉತ್ಪನ್ನಕ್ಕೆ ಉತ್ತೇಜನ ಕೊಡುವ ಧೃಷ್ಟಿಯಿಂದ ಅದರ ಆಮದಿನ ನಿರ್ಬಂಧ, ರಫ್ತಿಗೆ ನೆರವು, ಕೃಷಿ ಅಭಿವೃದ್ಧಿಯೋಜನೆ ಮೊದಲಾದ ನಾನಾ ವಿಧಗಳಿಂದ ಸರಕಾರ ಕೃಷಿಯಲ್ಲಿ ಆಸಕ್ತಿವಹಿಸುವುದುಂಟು.

ಭಾರತದಂತಹ ಅಭಿವೃದ್ಧಿಶೀಲರಾಷ್ಟ್ರಗಳಲ್ಲಿ ಸರಕಾರದ ನೆರವಿಲ್ಲದೆ ಕೃಷಿ ಕ್ಷೇತ್ರ ಬದುಕುವಂತೆಯೇ ಇಲ್ಲ. ಭಾರತದಲ್ಲಂತೂ ಕೃಷಿಯಲ್ಲಿ ಸರಕಾರದ ಮಧ್ಯ ಪ್ರವೇಶ ಅತ್ಯಂತ ಅವಶ್ಯಕವೆನಿಸಿದೆ. ಇದಕ್ಕೆ ಕಾರಣಗಳೆಂದರೆ–

ಕೃಷಿ ಪ್ರಕೃತಿಯ ಕೈಗೊಂಬೆಯಾಗಿದ್ದು, ಅದು ಮಳೆಯೊಂದಿಗೆ ನಿರಂತರವಾಗಿ ಜೂಜಾಟ ನಡಸಬೇಕಾಗುತ್ತದೆ. ಪ್ರಕೃತಿಯ ಪ್ರಕೋಪದಿಂದ ಉಂಟಾಗುವ ಅಸ್ಥಿರತೆ, ಆಘಾತಗಳನ್ನು ಕೃಷಿ ಎದುರಿಸಬೇಕಾಗುತ್ತದೆ. ಭಾರತದಲ್ಲಿ ಕೃಷಿ ಇಂದಿಗೂ ಹಿಂದುಳಿದ ಕೈಗಾರಿಕೆ ಎನಿಸಿದೆ. ಇಲ್ಲಿಯ ಕೃಷಿ ಉತ್ಪಾದನೆ ವ್ಯವಸ್ಥೆಯಲ್ಲಿ ಸರಕಾರ ಮಾತ್ರವೇ ಸ್ಥಿರತೆಯನ್ನು ತರಬಲ್ಲದು. ಭಾರತದಲ್ಲಿ ಕೃಷಿಯನ್ನು ಅವಲಂಬಿಸಿರುವವರ ಪ್ರಮಾಣ ಅತಿ ಹೆಚ್ಚು. ಕೃಷಿಯ ಮೇಲಿನ ಒತ್ತಡವನ್ನು ಕಡಮೆಮಾಡಬೇಕಾದರೆ ಹೆಚ್ಚುವರಿಯಾಗುವ ಕೃಷಿ ಕಾರ್ಮಿಕರನ್ನು ಇತರೆ ಉದ್ಯೋಗಗಳಲ್ಲಿ ನೆಲೆಗೊಳಿಸಬೇಕಾಗುತ್ತದೆ. ಇದಕ್ಕಾಗಿ ಸರಕಾರದ ಪ್ರವೇಶ ಅಗತ್ಯ. ಭಾರತದ ಕೃಷಿ ಸಂಘಟನೆ ಮತ್ತು ಕೃಷಿವ್ಯವಸ್ಥೆ ತುಂಬ ಅಸಮರ್ಪಕವೆನಿಸಿದೆ. ಅವ್ಯವಸ್ಥೆಯಿಂದ ಕೂಡಿರುವ ಜಮೀನು ಹಿಡುವಳಿ. ಗೇಣಿ ಪದ್ಧತಿ, ಮಾರಟ ಮುಂತಾದುವನ್ನು ಸರಿಪಡಿಸಲು ಸರಕಾರ ಮುಂದೆ ಬರಬೇಕಾಗುತ್ತದೆ. ಇದರ ಜೊತೆಗೆ ಮಧ್ಯವರ್ತಿಗಳು, ಸಾಲಿಗರು ಮಾರುಕಟ್ಟೆಯ ಏರಿಳಿತಗಳು ಇವೆಲ್ಲವೂ ಭಾರತದಲ್ಲಿ ಸರಕಾರದ ಪ್ರವೇಶ ಅತ್ಯಗತ್ಯವೆನಿಸುವಂತೆ ಮಾಡಿವೆ. ಭಾರತದ ರೈತ ಅಜ್ಞಾನಿ, ಅನಕ್ಷರಸ್ಥ, ಅವನಿಗೆ ಆಧುನಿಕ ಕೃಷಿ ವಿಧಾನಗಳ ಬಗ್ಗೆ ತಿಳಿದಿರುವುದಿಲ್ಲ, ಮಾರುಕಟ್ಟೆಯ ಪ್ರವೃತ್ತಿಗಳ ಬಗ್ಗೆ ಅವನು ತುಂಬ ಅಮಾಯಕ. ಇದೇ ಸ್ಥಿತಿಯಲ್ಲಿ ಅವನನ್ನು ಮುಂದುವರಿಯಲು ಬಿಟ್ಟರೆ ಭಾರತದ ಉದ್ಧಾರ ಅಸಾಧ್ಯ. ಈ ದೃಷ್ಟಿಯಿಂದ ಭಾರತದ ಕೃಷಿಯಲ್ಲಿ ಸರಕಾರದ ಪಾತ್ರ ಅತಿಮಹತ್ವದ್ದಾಗಿದೆ.

ಭಾರತದ ಕೃಷಿ ಮಳೆಯನ್ನು ಅವಲಂಬಿಸಿದೆ. ಈ ಪರಿಸ್ಥಿಯನ್ನು ತಪ್ಪಿಸಲು ನೀರಾವರಿ ಸೌಲಭ್ಯಗಳನ್ನು ವಿಸ್ತರಿಸಬೇಕಾಗುತ್ತದೆ. ಈ ದಿಸೆಯಲ್ಲಿ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರಲು ಸರಕಾರದ ಪ್ರದೇಶ ಅಗತ್ಯ. ಎಷ್ಟೋ ಅಭಿವೃ



ದ್ಧಿಯೋಜನೆಗಳನ್ನು ಜಾರಿಗೆತಂದರೂ ಅವುಗಳಲ್ಲಿ ರೈತರಿಗೆ ನಂಬಿಕೆ ಬಂದ ಹೊರತು ಕೃಷಿ ಅಭಿವೃದ್ಧಿ ಸಾಧ್ಯವಿಲ್ಲ. ಮಿಶ್ರಬೇಸಾಯ ಹೊಸತಳಿಗಳು ಮತ್ತು ರಾಸಾಯನಿಕ ಗೊಬ್ಬರಗಳ ಬಳಕೆ, ಸುಧಾರಿತ ಬೇಸಾಯದ ವಿಧಾನ ಇತ್ಯಾದಿಗಳಲ್ಲಿ ರೈತರಿಗೆ ನಂಬಿಕೆಯನ್ನು ಮೂಡಿಸಬೇಕಾಗುತ್ತದೆ. ಇದು ಸರಕಾರದಿಂದ ಮಾತ್ರ ಸಾಧ್ಯ.

ಸರಕಾರದ ನೀತಿ ಮತ್ತು ಕಾರ್ಯಗಳು ಕೃಷಿಉತ್ಪಾದನೆಯ ಮೇಲೆ ಗಮನಾರ್ಹ ಪರಿಣಾಮ ಬೀರುತ್ತವೆ. ಸರಕಾರದ ನೀತಿಗಳು ಮತ್ತು ಕಾರ್ಯಗಳು ಅನೇಕ ಬಗೆಯಾಗಿರುತ್ತವೆ ಸರಕಾರದ ನೀತಿಗಳಲ್ಲಿ ಸುಧಾರಣೆಗಳು ತೆರಿಗೆ ವಿದೇಶಿ ವಿನಿಮಯ, ಸುಂಕಗಳು, ಸ್ವದೇಶಿ ಬೆಲೆಗಳು, ಸಾರ್ವಜನಿಕ ಬಂಡವಾಳ ತೊಡಗಿಸುವಿಕೆಗಳು ಸೇರಿರುತ್ತವೆ. ಸರಕಾರದ ಕಾರ್ಯಗಳಲ್ಲಿ ವಿದ್ಯಾಭ್ಯಾಸದ ಕಾರ್ಯಕ್ರಮಗಳು, ಸಂಶೋಧನೆ, ಸಾಲ, ಮಾರುಕಟ್ಟೆ ನಿಯಂತ್ರಣ, ಭೂಮಿಯ ಅಭಿವೃದ್ಧಿ, ಸಾರಿಗೆ ಸೌಲಭ್ಯಗಳನ್ನು ಒದಗಿಸುವಿಕೆಗಳು ಸೇರಿರುತ್ತವೆ. ಹೀಗೆ ನಾನಾ ಕಾರಣಗಳಿಂದ ಭಾರತದ ಕೃಷಿಯಲ್ಲಿ ಸರಕಾರದ ಸ್ಥಾನ ಉನ್ನತ ಮಟ್ಟದ್ದಾಗಿದೆ.

ಇಂದು ನಾವು ಯೋಜನಾ ಪಥದಲ್ಲಿ ಬಹುದೂರಸಾಗಿ ಬಂದಿದ್ದೇವೆ. ಯೋಜನೆಗಳಲ್ಲಿ ಕೃಷಿ ಸುಧಾರಣೆ ಮತ್ತು ಅಭಿವೃದ್ಧಿಗಾಗಿ ಸರಕಾರ ಅನೇಕ ದಿಕ್ಕುಗಳಲ್ಲಿ ಪ್ರಯತ್ನಿಸುತ್ತದೆ ಯೋಜನೆಗಳ ಮೂಲಕ ಆಹಾರೋತ್ಪಾದನೆ ಹೆಚ್ಚಿರುವುದರಿಂದ ದೇಶದ ಕೃಷಿರಂಗದಲ್ಲಿ ನವಚೈತನ್ಯ ಮೂಡಿದೆ. ಅಧಿಕ ಇಳುವರಿಯ ಹೊಸತಳಿಗಳು ರೈತರನ್ನು ಆಕರ್ಷಿಸಿವೆ ಹಳೆಯ ಸಂಪ್ರದಾಯಗಳಲ್ಲಿ ನಡೆಸುತ್ತಿದ್ದ ಕೃಷಿಯಲ್ಲಿ ಇಂದು ಸುಧಾರಣೆಯ ಗಾಳಿ ಬೀಸಿದೆ. ಕೃಷಿ ಇಂದು ಒಂದು ದೊಡ್ಡ ಉದ್ಧಿಮೆಯಾಗಿ ರೂಪುಗೊಳ್ಳುತ್ತಿದೆ. ಭಾರತೀಯ ಕೃಷಿಯ ಅತ್ಯಂತ ತೃಪ್ತಿಕರ ಸ್ಥಿತಿಯನ್ನು ಇದು ಸೂಚಿಸುತ್ತದೆ. ಈಗ ಸಧ್ಯದಲ್ಲಿ ಇರುವ ಅನೇಕ ರೀತಿಯ ಹಾಗೂ ಹೊಸ ಕಾರ್ಯಕ್ರಮಗಳು ಅನುಷ್ಠಾನದಿಂದ ತನ್ನ ಮಾರುಕಟ್ಟೆಗಳ ಬೇಡಿಕೆಯನ್ನಷ್ಟೇ ಈಡೇರಿಸುವುದಲ್ಲದೆ. ಅಂತರ ರಾಷ್ಟ್ರೀಯ ಮಾರುಕಟ್ಟೆಗಳಿಗೂ ಸರಬರಾಜುಮಾಡುವ ಸ್ಥಿತಿಯನ್ನು ಭಾರತ ಮುಟ್ಟುತ್ತಿದೆ. ದೇಶದ ಕೃಷಿಯಲ್ಲಿ ಈಗಾಗಲೇ ಭದ್ರವೈಜ್ಞಾನಿಕ ಸಾಮರ್ಥ್ಯವನ್ನು ದೃಷ್ಟಿಸಲಾಗಿದೆ. ಹಾಗೂ ಇದನ್ನು ಗ್ರಾಮೀಣ ಪ್ರದೇಶಗಳಿಗೆ ಮುಟ್ಟಿಸಲು ಅಭಿವೃದ್ಧಿ ತಂತ್ರ ಅಗತ್ಯ ಸಾಧನಗಳನ್ನು ರೂಪಿಸಲಾಗುತ್ತಿದೆ. ಕೃಷಿ ಬೆಳವಣಿಗೆಯ ಗತಿಯನ್ನು ಮುಂದೆ ಮತ್ತಷ್ಟು ತೀವ್ರಗೊಳಿಸಲು ಸರಕಾರ ಪ್ರಯತ್ನಿಸುತ್ತದೆ.

ಇಂದು ಭಾರತದಲ್ಲಿ ಕೃಷಿ ಇಲಾಖೆಗಳು ವ್ಯಾಪಕವಾಗಿ ಬೆಳೆದಿವೆ. ವಿವಿಧ ಮಾರುಕಟ್ಟೆಗಳಲ್ಲಿನ ಬೆಲೆಗಳ ಸಮೀಕರಣ ಮತ್ತು ಅವುಗಳ ಸ್ಥಿರತೆಯ ಸ್ಥಾಪನೆ

ಇವುಗಳಿಂದಾಗಿ ಭಾರತದಲ್ಲಿ ಉತ್ಪನ್ನ ವಿನಿಮಯ ಕೇಂದ್ರವನ್ನು ಸ್ಥಾಪಿಸಲಾಗಿದೆ. ಶಿಷ್ಟೀಕರಣ, ಶ್ರೇಣೀಕರಣ, ಮಾರುಕಟ್ಟೆಯ ಸ್ಥಳ, ಪೇಟೆ ಪ್ರವೃತ್ತಿಗಳನ್ನು ಕುರಿತು ಸುದ್ದಿಪ್ರಕಟಣೆ ಇತ್ಯಾದಿ ಸೌಲಭ್ಯಗಳನ್ನು ಈ ಕೇಂದ್ರ ಒದಗಿಸುತ್ತದೆ. ಬೆಲೆಗಳ ಏರಿಳಿತಗಳ ನಷ್ಟ ಸಂಭವಗಳಿಗೆ ರಕ್ಷಣೆಯನ್ನು ಈ ಕೇಂದ್ರ ಕೊಡುತ್ತದೆ. ಆಹಾರ ಧಾನ್ಯಗಳು, ಹತ್ತಿ, ಸೆಣಬು ಎಣ್ಣೇಬೀಜಗಳು ಮುಂತಾದವು ಈ ಕೇಂದ್ರಗಳಲ್ಲಿ ಮುಖ್ಯವಾಗಿ ವಹಿವಾಟಿಗೆ ಒಳಪಡುವ ಪದಾರ್ಥಗಳಾಗಿದ್ದು ಇವು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸೇರಿವೆ ಕೃಷಿ ಉತ್ಪನ್ನ ವಿನಿಮಯ ಕೇಂದ್ರದ ವೈಶಿಷ್ಟ್ಯವೆಂದರೆ. ಒಂದು ಪದಾರ್ಥಕ್ಕೆ ಸಿದ್ಧವಾದ, ನಿರಂತರವಾದ ಮತ್ತು ತತ್‌ಕ್ಷಣದಲ್ಲಿ ಸರಕನ್ನು ಹಣಕ್ಕೆ ಪರಿವರ್ತಿಸಿಕೊಳ್ಳಬಹುದಾದ ಮಾರುಕಟ್ಟೆಯನ್ನು ಒದಗಿಸುವುದು.

ನಮ್ಮ ದೇಶದಲ್ಲಿ ಸರಕಾರಿ ಕ್ಷೇತ್ರದಲ್ಲಿ ಉಗ್ರಾಣಗಳನ್ನು ಸ್ಥಾಪಿಸಲಾಗಿದ್ದು ರಾಷ್ಟ್ರಮಟ್ಟದಲ್ಲಿ ಉಗ್ರಾಣ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಈ ಸಂಸ್ಥೆಗಳು ದೇಶಾದ್ಯಂತ ಸುಮಾರು 744 ಉಗ್ರಾಣಗಳನ್ನು ಸ್ಥಾಪಿಸಿವೆ. ಈ ಉಗ್ರಾಣಗಳ ಒಟ್ಟು ದಾಸ್ತಾನು ಸಾಮರ್ಥ್ಯ 34,6 ಲಕ್ಷಟನ್‌ಗಳಷ್ಟಾಗಿದೆ. ದಾಸ್ತಾನುಗಾರರು ಉಗ್ರಾಣಗಳಿಗೆ ಸರಕುಗಳನ್ನು ತಂದೊಡನೆಯೇ, ಅದನ್ನು ಪರೀಕ್ಷಿಸಿ, ವರ್ಗೀಕರಿಸಿ ತೂಕಮಾಡಲಾಗುತ್ತದೆ. ನಂತರ ಚೀಲಗಳನ್ನು ಮತ್ತು ಪಾಲಿಥಿನ್‌ಷೀಟ್, ಚಾಪೆಗಳ ಮೇಲೆ ಇಲ್ಲವೆ ಮಂದ ಚೌಕಟ್ಟುಗಳ ಮೇಲೆ ಅಚ್ಚುಕಟ್ಟಾಗಿ ಇಡಲಾಗುತ್ತದೆ. ಸರಕಿಗೆ ಹುಳು ಹುಪ್ಪಟೆ ಬೀಳದಂತೆ ನೋಡಿಕೊಳ್ಳಲು ಅಗತ್ಯವಾದ ಕೀಟನಾಶಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಇಂತಹ ಕ್ರಮಗಳಲ್ಲಿ ಮುಖ್ಯವಾದುವು ಪುಡಿಉದುರಿಸುವುದು, ಸಿಂಪಾಡಿಸುವುದು ಮತ್ತು ಹೊಗೆಯಾಡಿಸುವುದು. ಇಲಿ–ಹೆಗ್ಗಣಗಳಕಾಟವನ್ನು ತಪ್ಪಿಸಲು ಮೂಶಕ ನಾಶಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಉಗ್ರಾಣದಲ್ಲಿ ಸರಕನ್ನು ದಾಸ್ತಾನುಮಾಡುವವರಿಗೆ, ಉಗ್ರಾಣಕ ನೀತಿಯನ್ನು ಕೊಡಲಾಗುತ್ತದೆ, ಅದರ ಆಧಾರದ ಮೇಲೆ ಅನುಸೂಚಿಕ ಬ್ಯಾಂಕುಗಳು ಸರಕಿನ ಮೌಲ್ಯದ ಶೇಕಡ 50ರಿಂದ 60ರವರೆಗೆ ಸಾಲವನ್ನು ಮುಂಗಡವಾಗಿ ನೀಡುತ್ತವೆ. ದಾಸ್ತಾನುಗಾರರು ಈಹಣವನ್ನು ತಮ್ಮ ವ್ಯವಸಾಯ ವ್ಯಾಪಾರಗಳಲ್ಲಿ ಹೂಡಿ ಅಧಿಕ ಲಾಭಗಳಿಸಬಹುದು. ದೇಶದಲ್ಲಿ ಕೃಷಿ ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದು ಹಾಗೂ ರೈತರಿಗೆ ಮತ್ತು ಬಳಕೆದಾರರಿಗೆ ಸರಿ ಹೊಂದುವ ರೀತಿಯನ್ನು ರೂಪಿಸುವುದು ಕೇಂದ್ರ ಸರಕಾರದ ಸಂಸ್ಥೆಗಳ ಮುಖ್ಯ ಉದ್ದೇಶ. ಈ ದೆಸೆಯಲ್ಲಿ ಕೃಷಿ ಮಂತ್ರಿ ಶಾಖೆಗೆ ನೇರವಾಗಿ ಸಂಬಂಧಿಸಿದಂತೆ ಏಳು ಬೃಹತ್ ಸಂಸ್ಥೆಗಳು ಕಾರ್ಯನಿರ್ವಹಿಸುತ್ತವೆ.





# ಗಮಕ ಪ್ರಚಾರ : ಚಂಪೂ ಕಾವ್ಯಗಳು

—ಚನ್ನಪ್ಪ ಎರೇಸೀಮೆ

## ಗಮಕಿಯೋರ್ವ ಶ್ರೇಷ್ಠ ಕಲೆಗಾರ :

ಉತ್ತಮ ಸಾಹಿತ್ಯ ಸೃಷ್ಟಿಯೇ ಚಿತ್ತರಂಜನೆಗಾಗಿ. ಇಷ್ಟೇ ಅಲ್ಲ, ಅದು ಯಶಸ್ಸನ್ನೂ, ಅಲ್ಪ ಸ್ವಲ್ಪ ಅರ್ಥಲಾಭವನ್ನೂ, ವ್ಯಾವಹಾರಿಕ ಕೌಶಲ್ಯವನ್ನೂ ಮಾಡೀತು. ಮನಸ್ಸನ್ನು ಪುಳುಕಿದ ಅಮಂಗಲವನ್ನ ಪರಿಹರಿಸಿ ನೀರು ನೆಲ ಬಾನುಗಳಲ್ಲಿಲ್ಲದ ನೂತನ ಶಬ್ದ ಬ್ರಹ್ಮಾಂಡದ ಅಲೌಕಿಕಾನಂದಾನುಭೂತಿಯನ್ನು ಆ ಕ್ಷಣದಲ್ಲಾದರೂ ಉಂಟು ಮಾಡೀತು. ಈ ಮಾತು ಕವಿಗೂ ಕಾವ್ಯವಾಚಕನಿಗೂ ಸಹೃದಯನಿಗೂ ಅನ್ವಯಿಸುವಂತಹುದು. ವೇದಾದಿಗಳು ಶಬ್ದಪ್ರಧಾನವಾಗಿ ಪ್ರಭುಸಮ್ಮಿತಗಳಾದರೆ, ಪುರಾಣಗಳು, ಅರ್ಥಪ್ರಧಾನವಾಗಿ ಮಿತ್ರಸಮ್ಮಿತಗಳು. ಕಾವ್ಯಗಳು ನವರಸ ಪ್ರಧಾನವಾದ ಕಾಂತಾಸಮ್ಮಿತಗಳು. ಇವು ಭಾಷಾ ಸೌಂದರ್ಯ ಅರ್ಥಸೌಂದರ್ಯಗಳಿಂದ ಘಟನಾವಳಿಗಳ ಸೌಂದರ್ಯವನ್ನು ಹೆಚ್ಚಿಸಿ ನಮ್ಮ ಭಾವ ಕೋಶದಲ್ಲಿ ಕವಿತಾನುಕಂಡುಂಡು ಅಭಿವ್ಯಕ್ತಿಗೊಳಿಸಿದ ಅನೇಕ ರಾಗರಸಭಾವಗಳನ್ನೂ ಶಬ್ದಚಿತ್ರ, ಪ್ರಕೃತಿ ಚಿತ್ರ, ವ್ಯಾವಹಾರಿಕ ಚಿತ್ರಗಳನ್ನು ಸಂಸ್ಕಾರರೂಪವಾಗಿ ತುಂಬುವ ಕಾರ್ಯ ಮಾಡುವ ಇನ್ನೊಬ್ಬ ಬ್ರಹ್ಮನ ಸೃಷ್ಟಿಗಳು. ಅವನ ಈ ಶಾಬ್ದಿಕ ಬ್ರಹ್ಮಾಂಡದಲ್ಲಿ ವಿಹರಿಸುವವನಿಗೆ ಅಪ್ರತ್ಯಕ್ಷವಾಗಿ ಅನೇಕ ನೀತಿಬೋಧೆ ಮಾಡಿ ಪ್ರಬುದ್ಧ ಭಾವವನ್ನೂ ನೂತನ ರಸಲಾಭವನ್ನೂ ಉಂಟು ಮಾಡುತ್ತಾನೆ. ಆದ್ದರಿಂದ ಲಾಕ್ಷಣಿಕರು,

> ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂಕಲಾಸುಚ ।
> ಕರೋತಿ ಕೀರ್ತಿಂ ಪ್ರೀತಿಂಚ ಸಾಧುಕಾವ್ಯನಿಷೇವಣಾತ್ ॥

— ಎಂದು ಹೇಳಬೇಕಾಯಿತು. ಇದು ಬಹು ದೊಡ್ಡ ಮಾತು. ಆದರೂ ಆದೀತು. ಏನೂ ಆಗದಿದ್ದರೂ ಸದಃಪರ ನಿರ್ವೃತಿಯಂತೂ ಎಂಥವನಿಗೂ ಆಗುತ್ತದೆಂಬುದನ್ನು ಸತ್ಯ. ಇಂಥ ಆನಂದಕ್ಕೆ ಶ್ರೇಷ್ಠಗಮಕಿಯ ಗಮಕ ಶ್ರೇಷ್ಠ ಮಾಧ್ಯಮ ಗಮಕಿ ಕಾವ್ಯಸತ್ವವನ್ನು ಶ್ರೋತೃವಿನಲ್ಲಿ ಬೇಸೆಯುವ ಶ್ರೇಷ್ಠ ಬೆಸುಗೆಗಾರ. ತನ್ನಲ್ಲಿ ಗಮಕ ಕೌಶಲವೆಷ್ಟೆಷ್ಟು ಪ್ರೌಢಿಮೆ ಪಡೆದಿರುವುದೇ ಅಷ್ಟಷ್ಟರ ಮಟ್ಟಿಗೆ ಈ ಕಾರ್ಯದಲ್ಲಿ

ಸಮರ್ಥನಾಗುತ್ತಾನೆ. ಮೂಲತಃ ಕಾವ್ಯಗಳು ಸಾಹಿತ್ಯಾರ್ಥ ಗೇಯಾರ್ಥಗಳೆರಡರಿಂದ ಕೂಡಿ ಮನಸಂಕಲ್ಪಚಾಲಿತ ರಚನಾವಿಶೇಷಗಳಾಗಿವೆ. ಇದು ಕೇವಲ ಸಂಗೀತ ಪ್ರಧಾನವಂತೂ ಅಲ್ಲ. ಸಂಗೀತ ದೃಷ್ಟಿಯಿಂದ ಹಾಡುಗೇಯಾರ್ಥ ಪ್ರಧಾನವಾಗಿದ್ದು ಅರ್ಥ, ಗೌಣವೆನಿಸಿದರೆ ಗಮಕ ಗೇಯಾರ್ಥಗೌಣವಾಗಿ ಸಾಹಿತ್ಯಾರ್ಥ ಪ್ರಧಾನವಾಗಿದೆ. ಈ ಮರ್ಮವರಿತು ಗಮಕಪ್ರೌಢಿಮೆಯಿಂದ ಶ್ರೋತೃತ್ವವನ್ನು ತನ್ನೆಡೆಗೆ ಆಕರ್ಷಿಸಿ ಸಾಹಿತ್ಯಾರ್ಥವನ್ನು ಮೈಮನಕ್ಕಿಳಿಸಿ ಭಾವದಲ್ಲಿ ರಸತುಂಬಿ, ಹೊರಹೊಮ್ಮಿತೋ ಎನೆ ಆನಂದ ಬಾಷ್ಪಸುರಿಸುವಂತೆ ಮಾಡುವಲ್ಲಿ ಯಶಸ್ವಿಯಾದರೆ ಕೃತಕೃತ್ಯನಾದ ಹಾಗೆ. ಪ್ರತಿಭಾ ಸಂಪನ್ನನಾದ ಮಹಾಕವಿಯ ಕಾವ್ಯದಲ್ಲಿ ಪದಸಂಯೋಜನಾ ನಿಯಮದಿಂದುಂಟಾದ ವಾಕ್ಯದ ತಾತ್ಪರ್ಯದಲ್ಲಿರುವ ಅರ್ಥದಿಂದ ರಸಾನುಭೂತಿಯನ್ನುಂಟು ಮಾಡುವುದಕ್ಕೆ ಬೇಕಾಗುವ ಸ್ವರಸಂಯೋಜನಾ ಶಕ್ತಿಯ ಪ್ರತ್ಯುತ್ಪನ್ನಮತಿಯಾಗಿ, ಚಿತ್ತವಿಕಾಸ, ಚಿತ್ತ ವಿಸ್ತಾರಾದಿ ಕ್ರಿಯೆಗಳನ್ನುಂಟುಮಾಡಿ ತನ್ಮೂಲಕ ಮಾನವನ ಹೃದಯ ಸಂಸ್ಕಾರಕ್ಕೆ ನೆರವಾಗುವ ಅವನ ಅಂತಃಕರಣವನ್ನೇ ಗೆಲ್ಲಬಲ್ಲ ಉತ್ತಮ ಲಲಿತ ಕಲೆಗಾರ. ಕಳೆದ ಶತಮಾನದ ಶ್ರೇಷ್ಠ ಗಮಕಿಯೆಂದು ಪ್ರಖ್ಯಾತನಾದ ಬಸವಪ್ಪಶಾಸ್ತ್ರಿಯ ಬಗೆಗೆ ಲೋಕದ ಅಭಿಪ್ರಾಯವನ್ನೇ ಕ್ರೋಢೀಕರಿಸಿ ನುಡಿದಂತೆ ಸಹೃದಯರಾದ ಶ್ರೀ ಆರ್ ತಾತ ಎಂ.ಎ.ಎಲ್.ವಿ ಅವರು—

ಬಿಂಬವನ್ನಂ ನುಚ್ಚು ನೂರನಪ್ಪನಂ ಎರ್ದೆಬೆಳಗಲ್ ಬೆಳ್ಗಸಂ ಚೆಂದ್ರಿಕಾ ವಿ|
ಸ್ತರಮುಂ ತನ್ನೊಂದು ನಲ್ಗಬ್ಬದ ಗುನ್ನಮೆ ಕರಂ ಪೌರ್ಣಿಯಾಗಲ್ ಮನಂಗೋ|
ಳ್ವ ರ ಸಕ್ಕಂಬಾದ ಪದ್ಯಗಳನೆರವಿಯರಲ್ ವಿಲ್ಲನಾಂಕಣ್ಣೆ ಟಂಕಾ|
ರರವಂ ಶೀವೃತ್ತಿ ರಲ್ಕಾ ಬಸವಕವಿ ವಚೋಧಾರ ಮೇಂ ಕರ್ಣಪೂರಂ ||

—ಎಂದು ನುಡಿದ ನುಡಿಯಲ್ಲಿ ಗಮಕಿಯ ಗಮಕ ಶಕ್ತಿಯನ್ನೇ ಬಿಚ್ಚಿತೋರಿಸಿದ್ದಾರೆ ನಂಜನಗೂಡು ಸುಬ್ಬಶಾಸ್ತ್ರಿಗಳು. ರಸಿಕರಂಜನಚತುರ ಗಮಕಿ ಬಸವಪ್ಪಶಾಸ್ತ್ರಿ ಲಿಂಗೈಕ್ಯರಾದಾಗ—

ಕನ್ನಡಕಬ್ಬತುದೂಹಿಸ-1 ಲಿನ್ನೇಂ ಪುಟ್ಟುಗುಮೆ ರಸಿಕರಂಜನ ಚತುರಂ |
ರಸಕವಿಶಾಂಗನೆ ಹಿಮುದೊಳ್. ಬಸವಳಿದಬ್ಬಿನಿ ವೊಲಾದಳೆಂಬುದೆ ದುಗುಡಂ ||

—ಎಂದು ತೋಡಿಕೊಂಡಿರುವ ಸಂಕಟದ ಮಾತುಗಳಿಂದ, ಶ್ರೇಷ್ಠಗಮಕಿ ಸತ್ತರೆ ಕಾವ್ಯಸರಸ್ವತಿಗೂದುಗುಡವಂತೆ. ರಾಜಶೇಖರ ವಿಳಾಸ, ಗದುಗಿನ 'ಭಾರತ' ಬಸವಪುರಾಣ ಪಠನದಲ್ಲಿ ಬಸವಪ್ಪಶಾಸ್ತ್ರಿಗಳು ಸಮಕಾಲೀನದಲ್ಲೇ ಶ್ರೇಷ್ಠರಾಗಿದ್ದರಂತೆ.



ಕಾವ್ಯಾನಂದದಲ್ಲಿ ಸ್ವತಃ ಮೈಮರೆತು ಕವಿಯ ಮನೋಧರ್ಮದಲ್ಲಿ ಸಮರಸ-ಸಮರತಿಗೊಂಡು ಗಮಕಿ ತನ್ನ ಕರ್ಮ ಕೌಶಲವನ್ನು ಮೆರೆಸಬೇಕಾಗುತ್ತದೆ. ಅಲ್ಲದೆ ಗಮಕಿ ತಾನು ಪಠಿಸುವ ಕಾವ್ಯದ ಅಂತರಂಗವನ್ನೆಲ್ಲಾ ಅರ್ಥಮಾಡಿಕೊಂಡಿರುವ ವಿಶ್ವಾಸನೂ ಆಗಿರಬೇಕು. ಕಾವ್ಯಗತ ರಸಾನಂದ ವನ್ನು ಸ್ವತಃ ಅನುಭವಿಸುವವನೂ ಆಗಿರಬೇಕಾಗುತ್ತದೆ. ಬ್ರಹ್ಮಾನಂದ ಸಹೋದರ ಕಾವ್ಯಾನಂದ, ಅಂಥ ಆನಂದಾನುಭೂತಿಗೆ ಶ್ರೋತೃವಿನ ಹೃದಯವನ್ನು ಎಳೆದುಕೊಂಡು ಕೂಡಿಸುವ ಜಾಣ್ಮೆ, ಕಲೆಗಾರಿಕೆ ಸಾಹಿತ್ಯಾಭ್ಯಾಸ ಸಂಜನಿತ ಪರಿಪಕ್ವಾಂತಃಕರಣಶುದ್ಧಿ. ರಾಗ ರಸಭಾವಗಳನ್ನು ಸ್ವತಃ ಅನುಭವಿಸಿ ಇತರರನ್ನೂ ತನ್ನ ಅನುಭೂತಿಯಲ್ಲಿ ಸಮರಸಗೊಳ್ಳುವಂತೆ ಮಾಡುವ ಹೃದಯವಂತಿಕೆ — ಈ ಎಲ್ಲ ಶಕ್ತಿಗಳಿಂದ ಸಂಪನ್ನನಾದ ಗಮಕಿಯ ಗಮಕದಿಂದಲೇ ಈ ಕಲೆಗೊಂದು ಘನತೆ. ಪ್ರಾಚೀನ ಕನ್ನಡನಾಡಿನಲ್ಲಿ ಇಂಥ ಶಕ್ತಿಸಂಪನ್ನ ಗಮಕಿಗಳನೇಕರನ್ನು ಕೇಳುತ್ತೇವೆ. ಅಂದಿನ ಗಮಕಿಗಳು ಅನೇಕರು ದೊಡ್ಡ ಕವಿಗಳೂ ಅಹುದು. ಗಮಕಿಗಳೆಲ್ಲರೂ ಕವಿಗಳೇ ಆಗಿರಬೇಕೆಂದರ್ಥವಲ್ಲ. ಆಗಿದ್ದರೆ ಚೆನ್ನು ಎಂದು ತಾತ್ಪರ್ಯ. ಆದರೆ ಕಾವ್ಯಾಭ್ಯಾಸ ಸಂಜನಿತಪ್ರೌಢರಂತೂ ಆಗಿರಲೇಬೇಕು. ಷಟ್ಪದಿಗಳ ಜನಕನೆಂದು ಪ್ರಖ್ಯಾತನಾದ ಉಭಯಕವಿ ಕಮಲರವಿ ರಾಘವಾಂಕ ಶ್ರೇಷ್ಠ ಗಮಕಿಯಾಗಿದ್ದನೆಂಬುದು ಇಂದಿನ ಗಮಕಿಗಳೆಲ್ಲ ಹೆಮ್ಮೆಪಡುವ ಅಂಶ. ಅವನು ತಾನು ಬರೆದ ಮೀಸಲುಗವಿತೆಯಾದ ವೀರೇಶಚರಿತೆಯನ್ನು ವಾರಂಗಲ್ಲಿನ ಪ್ರತಾಪರುದ್ರನ ಆಸ್ಥಾನದಲ್ಲಿ ಓದಿ ಅವನಿಂದ ಬಹುಮಾನಿತನಾಗಿ ಬಂದುದೂ, ದೇವರಾಜನ ಸಭೆಯಲ್ಲಿ ತನ್ನ ಹರಿಶ್ಚಂದ್ರ ಕಾವ್ಯವನ್ನು ಕವಿ ಗಮಕಿಯದಿ ವಾಗ್ಮಿಗಳು ತಲೆದೂಗಿ ನೆರೆಮೆಚ್ಚಿ ಭಾಪುರೇ ಭಪ್ಪುರೇ ಎನ್ನುವಂತೆ ಸುಜನರ ಕರ್ಣಕಿನಿದಾಗೆ ನವರಸಭರಿತವಾಗಿ ಹೇಳಿದ ಅಂಶ ಸಾಹಿತ್ಯ ಚರಿತ್ರೆಯಲ್ಲಿ ಪ್ರಸಿದ್ಧಾಂಶ. ಆ ಕಾಲದ ಕರ್ನಾಟಕದ ಗಮಕಿಗಳು ನೆರೆಯ ರಾಜ್ಯಗಳಿಗೂ ಹೋಗಿ ಕನ್ನಡ ಕಾವ್ಯವಾಚನಮಾಡಿ ಬರುತ್ತಿದ್ದ ಬಗೆಗೆ ಅನೇಕ ಸಾಹಿತ್ಯಕ ಆಧಾರಗಳಿವೆ. ಓರ್ವ ವೃದ್ಧ ಮಾಹೇಶ್ವರನು ಕಳಿಂಗ ದೇಶಕ್ಕೆ ಹೋಗಿ ಅಲ್ಲಿಯ ಮಹಾಭಕ್ತನಪ್ಪ ಮಹಾದೇವ ಸೆಟ್ಟಿಯ ಎದುರಿನಲ್ಲಿ "ಪುರಾತನವಿರಚಿತ ಗದ್ಯ ಪದ್ಯಂಗಳಂ ಕೇಳಿಸುತ್ತಂ ಬಸವರಾಜನ ಗೀತದೊಳು ಬೇಡಿ ಬೇಡಿದ ಶರಣರ್ಗೆ ನೀಡದಿರ್ದಡೆ ತಲೆದಂಡ ಕೂಡಲಸಂಗಾ ಅವಧಾರು!" ಎಂಬ ಗೀತಮಂ ಪಾಡೆ, ಅವನು ಚಕಿತನಾಗಿ ಬಸವಣ್ಣನನ್ನು ಪರೀಕ್ಷಿಸಲು ಕಲ್ಯಾಣಕ್ಕೆ ಬಂದನಂತೆ.

ಆಂಧ್ರದೇಶದ ತ್ಯಾಗರಾಜನ ಆಸ್ಥಾನದ ವೇಳದೊಡತಿ ಮಹಾದೇವಿಯೆಂಬ ವೇಶ್ಯೆ ಹರಿಹರ ಮಹಾಕವಿಯ ಶೃಂಗಾರ ನರ್ತನೆಯ ಕಾವ್ಯ ಗಮಕವನ್ನು ಕೇಳಿ ಕಪಿಬೇಟಗೊಂಡು ಇಂಥ ರಸಿಕ ಪುರುಷನೊಡನೆ ಕೂಡಿ ಬದುಕಬೇಕೆಂದು ಇಚ್ಛಿಸಿ ಹಂಪೆಗೆ ಬಂದು ಸನ್ಯಾಸಿಯಾದ ಹರಿಹರನನ್ನು ಕಂಡು ಭ್ರಮ ನಿರಸನಗೊಂಡು ಸನ್ಯಾಸಿಯಾಗಿ ಸಾಯುವವರೆಗೆ ವಿರೂಪಾಕ್ಷನ ಅಂಗಣ ಗುಡಿಸಿಕೊಂಡಿದ್ದಳೆಂಬ ಕಥೆಯು ಪ್ರಸಿದ್ಧ.

1) ಸ್ಟೇಟ್ ಫಾರಂ ನಿಗಮ.
2) ರಾಷ್ಟ್ರೀಯ ಬೀಜ ಕಾರ್ಪೋರೇಷನ್.
3) ರಾಷ್ಟ್ರೀಯ ಕೃಷಿಸಹಕಾರ ಮಾರುಕಟ್ಟೆ ಫೆಡರೇಷನ್.
4) ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಕಾರ್ಪೋರೇಷನ್
5) ಭಾರತ ಆಹಾರ ನಿಗಮ.
6) ಮಾಡ್ರನ್ ಬೇಕರೀಸ್.
7) ಇಂಡಿಯನ್ ಡೈರಿ ಕಾರ್ಪೋರೇಷನ್

ಹೀಗೆ ಸರಕಾರದ ಹಲವಾರು ಕ್ರಮಗಳಿಂದಾಗಿ ಇತ್ತೀಚೆಗೆ ಭಾರತದ ಕೃಷಿ ಬಹಳಷ್ಟು ಸುಧಾರಿಸುತ್ತದೆ. ಸರಕಾರದ ಪ್ರಯತ್ನದಿಂದಾಗಿ ಭಾರತದ ಕೃಷಿಯಲ್ಲಿ ಹೊಸ ತಿರುವು ಮೂಡಿದೆ ಎನ್ನುವುದರಲ್ಲಿ ಸಂಶಯವಿಲ್ಲ.





# " ಸಿದ್ಧಗಂಗಾ ಶ್ರೀ "

## (ಸುವರ್ಣ ಸಂಪುಟ)

—ಶ್ರೀ: ಮೋಟಗಿ ಮಲ್ಲಿಕಾರ್ಜುನ ಅಥಣಿ

"ಒಂದು ಪ್ರಾರ್ಥನೆ, ಒಂದು ಕೃತಿರತ್ನ, ಒಂದು ರಾಜವಿಚಾರ ಇವು ಮಾನವನ ಸಾಮರ್ಥ್ಯವನ್ನು ಪರಾತ್ಪರ ಶಕ್ತಿಯೊಡನೆ ತಳುಕು ಹಾಕುವವು. ಆಗ ಪವಾಡವೇ ನಿತ್ಯ ನಿಯಮವೆನಿಸುವುದು. ಒಂದೇ ಒಂದು ಪರಾಕ್ರಮ ಕೃತಿಯು ಘಟನೆಗಳ ಕ್ರಮಗತಿಯನ್ನೆ ಬದಲಿಸಬಲ್ಲದು; ಏಕಾಂತದ ಏಕಾಕಿ ವಿಚಾರವು ಸರ್ವಸಮರ್ಥವಾಗುತ್ತಿದೆ"

ಶ್ರೀ ಅರವಿಂದರು (ಸಾವಿತ್ರಿ)

ಹನ್ನೆರಡನೆಯ ಶತಮಾನದಲ್ಲಿ ಮಹಾ ವಿಭೂತಿಗಳಾದ ಬಸವಾದಿ ಪ್ರಮಥರು ಅವತರಿಸಿ ಬಂದು, ಭೂಮಿಯ ಮನುಕುಲದ ಬಾಳನ್ನು ಹಸನುಗೊಳಿಸಲು ತಮ್ಮ ಪರಮಾನುಭವ ಸಂಪತ್ತನ್ನೇ ಸೂರೆಗೈದು ಬಯಲಾದರು. ವಿಭೂತಿತ್ವ ಅದು ದೇಶ, ಕಾಲ, ವ್ಯಕ್ತಿಗಳಿಗೆ ಸೀಮಿತವಾದುದಲ್ಲ. ಅಂತೆಯೆ ಇಂದು ಶಿವ ಸ್ವರೂಪಿಗಳಾದ ಪರಮ ಪೂಜ್ಯ ಡಾ|| ಶಿವಕುಮಾರ ಮಹಾಸ್ವಾಮಿಗಳವರು ಅವತರಿಸಿ ಬಂದು, ಸಿದ್ಧಗಂಗೆಯಲ್ಲಿ ನಿಂದು ಮನುಕುಲೋದ್ಧಾರಕ್ಕಾಗಿ ಪರಿಶ್ರಮಿಸುತ್ತಲಿರುವರು. ದಯಾಸಾಗರ ಮೂರ್ತಿಗಳೂ ಮಹಾನುಭಾವಿಗಳೂ ಆದ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳವರು ಧರ್ಮ ದಾನ, ಅನ್ನದಾನ, ಜ್ಞಾನದಾನ ಇಂತೀ ತ್ರಿವಿಧ ದಾಸೋಹ ಮೂರ್ತಿಗಳಾಗಿ ದಿನವಿಡೀ ಈ ದಾಸೋಹವನ್ನು ಅವಿರತವಾಗಿ ನಡೆಸುತ್ತ ಸುಮಾರು ನಾಲ್ಕುಸಾವಿರ ಮಕ್ಕಳನ್ನು ಸಂರಕ್ಷಿಸುತ್ತಲಿರುವರು. ಪೂಜ್ಯ ಮಹಾಸ್ವಾಮಿಗಳವರ ಕೃಪೆಯಲ್ಲಿ ಮೂವತ್ತಾರು ವಿದ್ಯಾ ಸಂಸ್ಥೆಗಳು ಒಳ್ಳೇ ಪ್ರಗತಿಪಥದಲ್ಲಿ ನಡೆಯುತ್ತಲಿದ್ದು ಹತ್ತು ಸಾವಿರಕ್ಕೂ ಮಿಕ್ಕಿ ಮಕ್ಕಳು ಓದಿ ವಿದ್ಯಾಸಂಪಾದನೆ ಮಾಡುತ್ತಲಿರುವರು. ಶ್ರೀ ಸಿದ್ಧಗಂಗಾ ಶ್ರೀಗಳವರಿಂದ ಸಾಗಿರುವ ಇಂತಹ ಅದ್ಭುತ ಪವಾಡಮಯವಾದ 'ವಿಶ್ವಧರ್ಮ ಸಂಸ್ಥೆ' ಇಡಿಯ ಪ್ರಪಂಚದಲ್ಲಿಯೇ ಬೇರೊಂದಿಲ್ಲವೆಂದು ಧಾರಾಳವಾಗಿ ಹೇಳಬಹುದಾಗಿದೆ. ಇಂತಹ ಮಹಾತ್ಮರಾದ ಡಾ|| ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತಾದ ಅಭಿನಂದನಾ ಬೃಹತ್‌ಗ್ರಂಥರತ್ನ ಈ "ಸಿದ್ಧಗಂಗಾ ಶ್ರೀ" ಸುವರ್ಣ ಸಂಪುಟ.

ಕನ್ನಡ ಸಾಹಿತ್ಯ ಸರಸ್ವತಿಯ ಕಣ್ಮಣಿಯಂತಿದ್ದ ಈ "ಸಿದ್ಧಗಂಗಾ ಶ್ರೀ" ಸುವರ್ಣಸಂಪುಟವು-ಕ್ಷೇತ್ರ ಶ್ರೀ- ದರ್ಶನ ಶ್ರೀ- ಸಾಹಿತ್ಯ ಶ್ರೀ- ಕಲಾ ಶ್ರೀ ಎಂಬ ನಾಲ್ಕು ವಿಭಾಗಗಳಿಂದ ಕೂಡಿದ್ದು ಪ್ರಾರಂಭದ ಕ್ಷೇತ್ರ ಶ್ರೀ ವಿಶೇಷವಾಗಿ 'ಕವಿ

ಕಾಣಿಕೆ' ಉಪವಿಭಾಗದಿಂದೊಡಗೂಡಿ ಕೃತಿರತ್ನವು ಉತ್ಕೃಷ್ಟವೂ ಉಜ್ವಲವೂ ಉದಾತ್ತವೂಎನಿಸಿ ಸರ್ವಾಂಗ ಸುಂದರವಾಗಿ ಕಂಗೊಳಿಸುತ್ತಿದೆ.

ಕನ್ನಡ ಸಾಹಿತ್ಯ ಸೃಷ್ಟಿಯ ಅತ್ಯಂತ ಹಿರಿಯ ಮೇರುಕೃತಿರತ್ನವಾದ "ಸಿದ್ಧ-ಗಂಗಾ ಶ್ರೀ" ಸುವರ್ಣ ಸಂಪುಟವನ್ನು ನಾವು ಅವಲೋಕನ ಮಾಡಿದಾಗ ನಮಗೆ ಯಾವುದೋ ಒಂದು ಅಚಿಂತ್ಯವಾದ ಸ್ವರ್ಗೀಯ ಲೋಕದಲ್ಲಿ ವಿಹರಿಸಿದಂತಾಗಿ ಅಲ್ಲಿನ ಅಗಮ್ಯ ಅಗೋಚರಶಕ್ತಿ ಸಂಸ್ಪರ್ಶದಿಂದ ಅಮಿತಾನಂದವಾಗುತ್ತಿದೆ; ಹೃದಯ ಸಮುದ್ರ ಶಾಂತಿಯಿಂದ ತುಂಬಿ ತುಳುಕುತ್ತಿದೆ.

ಮಾನವ ಕೋಟಿಗೆ ತನ್ನ ಜೀವನವನ್ನು ಮಹಾಂತವಾಗಿಸಿ ಉಜ್ವಲಗೊಳಿಸಿಕೊಳ್ಳಬೇಕಾದರೆ ಇಂತಹ ಮಹಾನ್ ಧಾರ್ಮಿಕ– ಸಾಂಸ್ಕೃತಿಕ– ತಾತ್ತ್ವಿಕ ಜ್ಞಾನ ಬೋಧಕವಾದ ಸರ್ವಸಮರ್ಥ ಸರ್ವೋತ್ತಮ ಕೃತಿರತ್ನಗಳ ಅವಶ್ಯಕತೆ ಬಹಳವಾಗಿದೆ. ಅದರಲ್ಲೂ ಇಂದಿನ ವಿಜ್ಞಾನಮಯ ಜಗತ್ತಿಗೆ ಅತ್ಯಂತ ಅನಿವಾರ್ಯವಾಗಿದೆ. ಕೋಟ್ಯಾವಧಿ ವರ್ಷಗಳಿಂದಲೂ ಮಾನವನ ಉದಾತ್ತೀಕರಣಕ್ಕೆ ಅವನ ಜ್ಞಾನಸಂವರ್ಧನೆಗೆ ಈ ತೆರನಾದ ವಿವಿಧ ಜ್ಞಾನ ಬೋಧಾತ್ಮಕವಾದ ಸತ್ವಯುಕ್ತ ಧಾರ್ಮಿಕ ವೇದೋಪನಿಷತ್ತುಗಳೇ ಮೊದಲಾದ ದಿವ್ಯ ಸಾಹಿತ್ಯ ಕೃತಿರತ್ನಗಳೆಲ್ಲ ಸಹಾಯಕಗಳಾಗಿ ನಿಂತಿವೆಯೆಂಬುದು ಸರ್ವಶ್ರುತ.

ಕನ್ನಡ ಸಾಹಿತ್ಯ ನಭೋಂಗಣವೆನಿಸಿರ್ದ ಈ "ಸಿದ್ಧಗಂಗಾ ಶ್ರೀ" ಬೃಹತ್ ಕೃತಿಯಲ್ಲಿ ಪೂಜ್ಯ ಶಿವಕುಮಾರ ಶ್ರೀಗಳವರು ಅಧ್ಯಾತ್ಮ ರವಿಕೋಟಿ ತೇಜವಾಂತು ಬೆಳಗುತ್ತಲಿದ್ದರೆ, ಅಸಂಖ್ಯ ನಕ್ಷತ್ರಗಳೋಪಾದಿಯಲ್ಲಿ ನಾಡಿನ ಘನ ವಿದ್ವಾಂಸರ– ಕವಿ ಕಲಾವಿದರ ಗಣ್ಯ ಪುಣ್ಯ ಲೇಖನಗಳು ಮೂಡಿಬಂದು ಮಿನುಗುತ್ತ ಕುಣಿಯುತ್ತ ಕಂಗೊಳಿಸುತ್ತವೆ. ಅಂತೆಯೇ ಈ ಅಧ್ಯಾತ್ಮ ಸೂರ್ಯನ ನೂರು ಬಗೆಯ ಭಾವ ಚಿತ್ರಗಳು ಶೋಭಿಸುತ್ತಲಿವೆ.

ಭಗವತ್ ಸಾಕ್ಷಾತ್ಕಾರಕ್ಕೆ, ತತ್ತ್ವ ಜಿಜ್ಞಾಸು ಮಾನವನಿಗೆ ತನ್ನ ಹೃದಯಾಂತರಾಳದ ತುರೀಯ ನಿರಾಲಂಬ ನಿಜಾಕಾಶದಲ್ಲಿ ಬೆಳಗುವ ಚಿಜ್ಜ್ಯೋತಿಯ ಅವಶ್ಯಕತೆ ಎಷ್ಟಿದೆಯೋ ಅಷ್ಟೇ ಈ ಭೌತ ಜಗತ್ತಿಗೆ, ಆಶ್ರಯಭೂತವಾದ ನಿರಾಲಂಬ ಮಹದಾಕಾಶವನ್ನು ಬೆಳಗಿ ಪ್ರಜ್ವಲಿಸುವ ರವಿಕೋಟಿ ಕಿರಣಗಳ ಅವಶ್ಯಕತೆಯೂ ಇದೆ–ಯೆಂಬುದು ಅಪರಿಹಾರ್ಯವಷ್ಟೇ!

ಒಂದು ಸುಜ್ಞಾನದ ಅಂತರ್ ಸೃಷ್ಟಿಯ ದಿವ್ಯ ದೃಷ್ಟಿಯಾದರೆ, ಇನ್ನೊಂದು ವಿಜ್ಞಾನದ ಭೌತ ಸೃಷ್ಟಿಯನ್ನೊಳಗೊಂಡ ಬಾಹ್ಯಾಕಾಶದ ಬಹಿರ್ಮುಖ ಪ್ರಜ್ಞೆಯ ಭವ್ಯ ದೃಷ್ಟಿ! ಹೀಗೆ ಎರಡೂ ಒಂದನ್ನೊಂದು ಆಕರ್ಷಿಸಿ ಸರ್ವವ್ಯಾಪಿಯಾಗಿ ನಿಂದಿಹ-



ಸರ್ವಾತ್ಮ ಶಕ್ತಿ ಚೈತನ್ಯಯುಕ್ತ ಸರ್ವೇಶ್ವರ ವಿಶ್ವ ಸೃಷ್ಟಿ! ಒಂದು ಸುಜ್ಞಾನ! ಇನ್ನೊಂದು ವಿಜ್ಞಾನ! ಮಾನವನಿಗೆ ಈ ಉಭಯ ಜ್ಞಾನವೂ ಅತ್ಯವಶ್ಯಕವಾಗಿ ಬೇಕು. ಮಾನವ ಈ ವಿಜ್ಞಾನ ಮತ್ತು ಸುಜ್ಞಾನ ಎರಡನ್ನೂ ಪಡೆದಾಗಲೇ ಅವನಿಗಾಗುವುದು ಪೂರ್ಣಜ್ಞಾನ!

ಇಲ್ಲಿ ಭೂಗೋಲ ಹಾಗೂ ಖಗೋಲ ಶಾಸ್ತ್ರಜ್ಞ –ವಿಜ್ಞಾನಿಗೆ ಕೇವಲ ಆತ್ಮ ಜ್ಞಾನದ ಕೊರತೆಯಿದೆ. ಆದರೆ ದಿವ್ಯದೃಷ್ಟಿಯ ಸುಜ್ಞಾನಿ ಶಿವಯೋಗಿಯು ಬಾಹ್ಯ-ಭೌತಸೃಷ್ಟಿ- ಖಗೋಲ ಜ್ಞಾನವನ್ನು ಪ್ರತ್ಯೇಕವಾಗಿ ಪಡೆಯದಿದ್ದರೂ ತನ್ನ ಲಿಂಗಾಂಗ ಸಾಮರಸ್ಯ ಜ್ಞಾನಾನುಭವ ಶಕ್ತಿ ಸಾಮರ್ಥ್ಯದಿಂದ ಸಕಲ ವಿಶ್ವ ಬ್ರಹ್ಮಾಂಡವೆಲ್ಲವನ್ನೂ ವ್ಯಾಪಿಸಿಕೊಂಡು ಬೆಳಕಾಗಿ ನಿಲ್ಲಬಲ್ಲನೆಂಬುದು ಶತಸ್ಸಿದ್ಧವಾದುದು. ಇದುವೇ ವೀರಶೈವ ಸಿದ್ಧಾಂತ.

ಹೀಗೆ ಡಾ॥ ಶಿವಕುಮಾರ ಶಿವಯೋಗಿಗಳು "ಸಿದ್ಧಗಂಗಾ ಶ್ರೀ" ಬೃಹತ್ ಕೃತಿ ಬಾನಂಚಿನಲ್ಲಿ ಅಧ್ಯಾತ್ಮ ರವಿಕೋಟಿ ಕಿರಣಗಳಿಂದ ಬೆಳಗುತ್ತಲಿದ್ದರೆ, ಶಿವಯೋಗ ಸಿದ್ಧಿಪುರುಷರಾಗಿ ಸಿದ್ಧಗಂಗೆಯಲ್ಲಿ ನೆಲೆಸಿ– ಧರ್ಮಗಂಗೆ– ಜ್ಞಾನಗಂಗೆ– ಪ್ರಸಾದ ಗಂಗೆ ಈ ತ್ರಿವೇಣೀ ಸಂಗಮದ ತ್ರಿವಿಧ ದಾಸೋಹದಿಂದ ಲೋಕಪಾವನ ಮಾಡುತ್ತಲಿಹರು.

"ಸಿದ್ಧಗಂಗಾ ಶ್ರೀ" ಸುಮಾರು– ೧೬೫೦ ಪುಟಗಳ ಮಹಾ ಸಂಪುಟದಲ್ಲಿ ಮೊದಲನೆಯದಾದ 'ಕ್ಷೇತ್ರ ಶ್ರೀ' ವಿಭಾಗದಲ್ಲಿ ಸಿದ್ಧಗಂಗಾ ಕ್ಷೇತ್ರದ ಇತಿಹಾಸ ಮತ್ತು ಅಲ್ಲಿನ ಮಹಾಮಹಿಮರ ದಿವ್ಯ ಜೀವನ ಚರಿತ್ರೆಗಳು ಮೂಡಿ ಬಂದಿವೆ. ಉಪವಿಭಾಗವಾದ 'ಕವಿ ಕಾಣಿಕೆ'-ಯಲ್ಲಿ ನಾಡಿನ ಕವಿಸಂಕುಲ ಶ್ರೀ ಕ್ಷೇತ್ರ ಹಾಗೂ ಪೂಜ್ಯ ಶ್ರೀಗಳವರ ಬಗೆಗೆ ಭಕ್ತಿ ಪುರಸ್ಸರವಾಗಿ ಹಾಡಿದ ಗೀತ– ವಚನ ಕುಸುಮಗಳ ಸುವಾಸನೆ ಸೌಗಂಧ ತುಂಬಿ ಸೂಸಿದೆ.

ಕೃತಿರತ್ನದ ಎರಡನೆಯ ಭಾಗವಾದ 'ದರ್ಶನ ಶ್ರೀ' ವಿಶ್ವದ ಪ್ರಮುಖ ಧರ್ಮಗಳ ಪರಿಚಯಾತ್ಮಕ ಲೇಖನಗಳು ವಿದ್ವತ್ಪೂರ್ಣವಾಗಿದ್ದು ಅದರಲ್ಲಿ ವೀರಶೈವ ಧರ್ಮಸಾಹಿತ್ಯದ ವಿಶೇಷ ಪರಿಪೂರ್ಣ ಜ್ಞಾನದರ್ಶನದ ಆಳವಾದ ಅಭ್ಯಾಸಪೂರ್ಣ ಪ್ರಬುದ್ಧ ಲೇಖನಗಳಿವೆ– ಈ ವಿಭಾಗದಲ್ಲಿ.

ಮೂರನೆಯ ಭಾಗವಾದ 'ಸಾಹಿತ್ಯ ಶ್ರೀ' ಕನ್ನಡನಾಡಿನ ಸಾಹಿತ್ಯ ಚರಿತ್ರೆಗೆ ಬಸವಾದಿ ವೀರಶೈವ ಶಿವಶರಣರು ನೀಡಿರುವ ಆಧ್ಯಾತ್ಮ ಜ್ಞಾನಾನುಭವ ಸಂಪದ್ಭರಿತ ಸಂಸ್ತುತ್ಯ ಲೇಖನಗಳ ಸರಮಾಲೆಯನ್ನೊಳಗೊಂಡಿದೆ.

ಕೊನೆಯ ಭಾಗವಾದ 'ಕಲಾಶ್ರೀ' ಸಂಗೀತ, ನಾಟಕ, ಗಮಕ ಮೊದಲಾದ ಲಲಿತ ಕಲೆಗಳಿಗೆ ವೀರಶೈವ ಕಲಾವಿದರು ಸಲ್ಲಿಸಿದ ಅಪಾರ ಸೇವೆಯ ಸುಂದರ ಸಮೀಕ್ಷೆಯನ್ನೊಳಗೊಂಡ ಆಯಾ ಕ್ಷೇತ್ರದಲ್ಲಿ ಅಮಿತ ಭಕ್ತಿ ಗಾನ -ಕಲಾಸೇವೆಗೈಯ್ದ ನಾಮಾಂಕಿತ ನುರಿತ ಅನುಭಾವಿಗಳ ಅನುಭವಾತ್ಮಕ ಸುಂದರ ಲೇಖನಗಳ ಸೊಂಪಿದೆ; ಕಂಪಿದೆ; ಇಂಪಿದೆ; ಕಲಾವೈಭವ ಜ್ಞಾನಾಮೃತ ಸೇಚನೆಯ ತಂಪಿದೆ, — ಈ ವಿಭಾಗದಲ್ಲಿ.

ಈ ಬೃಹತ್ ಗ್ರಂಥದಲ್ಲಿ ಸುಮಾರು (೨೦೦) ಎರಡು ನೂರರಷ್ಟು ನಾಡಿನ ವಿಖ್ಯಾತ ವಿದ್ವಾಂಸರು, ಕವಿಕಲಾವಿದರು ತಮ್ಮ ತಮ್ಮ ಬಹುಶ್ರುತ ಅನುಭವಾತ್ಮಕ ಲೇಖನ- ಕವನ- ವಚನ ಮೊದಲಾದ ವಿವಿಧ ವಿಶ್ವಧರ್ಮಗಳ ಸ್ವರೂಪವಾಂತ ಒಂದು ಭವ್ಯವಾದ ವಿರಾಡ್ರೂಪದರ್ಶನವನ್ನೇ ಮಾಡಿಸಿ ಮನುಕುಲವನ್ನೇ ಪಾವನಗೊಳಿಸಬಹುದಾದ ಅಮೂಲ್ಯ ಬರಹಗಳಿಂದ ತುಂಬ ಶಿವಶಕ್ತಿಪೂರ್ಣ ಚೈತನ್ಯವನ್ನು ಸಾಂದ್ರಗೊಳಿಸಿ ಸೌಂದರ್ಯರಾಶಿ ತುಂಬಿ ತುಳುಕುವಂತೆ ಮಾಡಿದ್ದಾರೆ. ಅಂತೆಯೇ "ಸಿದ್ಧಗಂಗಾ ಶ್ರೀ" ಒಂದು ವಿಶ್ವಮಾನ್ಯ ಕೃತಿರತ್ನವೆಂದು ಹೇಳಬೇಕು. "ಒಂದು ಪ್ರಾರ್ಥನೆ, ಒಂದು ಕೃತಿರತ್ನ, ಒಂದು ರಾಜವಿಚಾರ ಇವು ಮಾನವನ ಸಾಮರ್ಥ್ಯವನ್ನು ಪರಾತ್ಪರ ಶಕ್ತಿಯೊಡನೆ ತಳಕು ಹಾಕುವುವು" ಎಂಬೀ ಮಹರ್ಷಿ ಅರವಿಂದರ ಅಮರವಾಣಿ ತ್ರಿವಾರ ಸತ್ಯವೇ.

ಗ್ರಂಥದ "ಕ್ಷೇತ್ರ ಶ್ರೀ" ವಿಭಾಗದಲ್ಲಿ —ಸ್ತೋತ್ರ, ಸಿದ್ಧಗಂಗಾ ಕ್ಷೇತ್ರ ಶಿವಗಂಗಾ ಕ್ಷೇತ್ರ, ಉದ್ದಾನ ಯತೀಶ್ವರ, ಶ್ರೀ ಶಿವಕುಮಾರ ಸ್ವಾಮಿಗಳವರು, ಶ್ರೀಗಳವರ ಲೇಖನಗಳು,- ಭಾಷಣಗಳು,- ಶ್ರೀವಾಣಿ, ಇನ್ನೂ ಹಲವಾರು ವಿಷಯ ನಿರೂಪಣೆಗಳು ಅಲ್ಲದೆ ನಾಡಿನ ಗಣ್ಯರ ಅನಿಸಿಕೆಗಳು ಹಳೆಯ ವಿದ್ಯಾರ್ಥಿಗಳ ಅನುಭವಗಳು ಇತ್ಯಾದಿ ಶೀರ್ಷಿಕೆಗಳ ಬಹುಮೌಲ್ಯ ಬರಹಗಳು- ಪೂಜ್ಯ ಶ್ರೀಗಳವರ ಹಾಗೂ ಅವರ ಪೂರ್ವಜರ ಬಗೆಗಿನ ಭಕ್ತಿ ಗೌರವಗಳ ಜೊತೆಗೆ ಅವರ ಭವ್ಯ-ದಿವ್ಯ ಬಂಗಾರ ಬಾಳಿನ ಚರಿತ್ರವನ್ನೊಳಗೊಂಡು ಕ್ಷೇತ್ರ ವಿವರಣೆಯನ್ನೂ ವಿವರಿಸುತ್ತಲಿವೆ. "ಕವಿಕಾಣಿಕೆ" ಈ ಉಪ ವಿಭಾಗದಲ್ಲಿ- ಸಿದ್ಧಗಂಗಾ ಮಹಾತ್ಮೆ, ಸಿದ್ಧಗಂಗೆಯ ಶ್ರೀಚರಣಕ್ಕೆ, ಸಿದ್ಧಗಂಗೆಯ ಬೆಳಕು, ಸಿದ್ಧಗಂಗಾ ಪ್ರಕೃತಿ- ಸಂಸ್ಕೃತಿ, ಶಿವಕುಮಾರಸ್ವಾಮಿಯೆನಿಪುದಚ್ಚರಿಯೆ?, ಶಿವಸುಪ್ರಭಾತ, ಭಕ್ತರ ಹರಕೆ, ಸಿದ್ಧಗಂಗೆ; ತ್ರಿವೇಣೀ ಸಂಗಮಗಂಗೆ, ಆನಂದ ರೂಪ, ಮೌನಚೇತನ ಶಕ್ತಿ, ಶ್ರೀ ಶಿವಕುಮಾರ ಯತೀಂದ್ರ ಪ್ರಶಸ್ತಿ ಶತಕಂ, ಜಂಗಮ ಪರುಷ ಶ್ರೀ ಸಿದ್ಧಗಂಗಾ ಮಹಿಮೆ ಇತ್ಯಾದಿ ಕವಿಕೋಗಿಲೆಗಳ ಭಕ್ತಿಗೀತ ವಚನ ಗಾನದಿಂಚರ ತರಂಗಗಳಿವೆ.

" ದರ್ಶನ ಶ್ರೀ " ವಿಭಾಗದಲ್ಲಿ- ಭಾರತೀಯ ಸಂಸ್ಕೃತಿಯಲ್ಲಿ ಧರ್ಮದ ಸಮನ್ವಯ ಸ್ವರೂಪ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ,



ಜೈನ ಸಿದ್ಧಾಂತದ ಸಾಮಾನ್ಯ ಸ್ವರೂಪ, ಬೌದ್ಧದರ್ಶನ, ಚಾರ್ವಾಕ-ದರ್ಶನ, ನಾಥ ಪಂಥ, ಅರವಿಂದ ದರ್ಶನ, ಥಿಯಾಸಫಿ, ಕ್ರೈಸ್ತಧರ್ಮ, ಸೂಫಿ ಮತ್ತು ವೀರಶೈವ ಅನುಭಾವ ಸಾಹಿತ್ಯ, ಶೈವ ಧರ್ಮದ ಹಿನ್ನೆಲೆ, ತಮಿಳುನಾಡಿನ ಶೈವ ಪರಂಪರೆ ಕಾಶ್ಮೀರಿಯ ಶೈವದರ್ಶನ, ಶೈವ ಮತ್ತು ವೀರಶೈವ- ಒಂದು ತಾತ್ವಿಕ ವಿಶ್ಲೇಶಣೆ, ವೀರಶೈವ ಮಠಗಳ ಪರಂಪರೆ, ವೀರಶೈವ ಧರ್ಮದ ಪ್ರಾಚೀನತೆ, ವೀರಶೈವ ದರ್ಶನದಲ್ಲಿ ಶಿವ - ಶಕ್ತಿ ಮತ್ತು ಅವುಗಳಿಗಿರುವ ಸಂಬಂಧ, ಸೃಷ್ಟಿಯ ವಚನಗಳು, ಲಿಂಗತತ್ವದ ಉಗಮ ಮತ್ತು ವಿಕಾಸ, ತತ್ವಗಳು, ಮೂವತ್ತಾರು ತತ್ವಗಳು, ಮತ್ತು ಏಕೋತ್ತರ ಶತಸ್ಥಲ ಅಷ್ಟಾಂಗಯೋಗ- ಶಿವಯೋಗ, ನವವಿಧ ಭಕ್ತಿ, ಷಡ್ವಿಧ ಭಕ್ತಿ ದೀಕ್ಷೆ, ಅರಪತ್ತನಾಲ್ಕು ಶೀಲಗಳು, ಕಾಯಕದ ಅರ್ಥಪ್ರಪಂಚ, ಅನುಭಾವ, ಕರಣದ ಹಸುಗೆ, -ಮಿಶ್ರಾರ್ಪಣ, ಮಂತ್ರಗೋಪ್ಯ, ಲಿಂಗಾಂಗ ಸಾಮರಸ್ಯ, ಶಿವಯೋಗ ಇತ್ಯಾದಿ ಶೀರ್ಷಿಕೆಗಳೊಂದಿಗೆ ಕಂಗೊಳಿಸುವ ಲೇಖನಗಳು, ಆಯಾಯ ಧರ್ಮತತ್ವಗಳ ಸಾರ ಸರ್ವಸ್ವವನ್ನೇ ಗರ್ಭೀಕರಿಸಿಕೊಂಡ ಆಳವಾದ ವಿಚಾರ ವಿಶ್ಲೇಷಣೆಯ ಮಣಿ ಮುತ್ತುಗಳ ಸುಂದರ ಸರಮಾಲೆ ಹೊಳೆಯುತ್ತಲಿದೆ. ಅದ್ಭುತ ಪ್ರಕಾಶಕಿರಣಗಳಿವೆ.

"ಸಾಹಿತ್ಯ ಶ್ರೀ" ವಿಭಾಗದಲ್ಲಿ ವೀರಶೈವ ಸಾಹಿತ್ಯದ ಉಗಮ, ಬಸವಪೂರ್ವಯುಗದ ವಚನಕಾರರು, ಬಸವಣ್ಣನವರ ಕಾಲದ ವಚನ ಸಾಹಿತ್ಯ, ಶೂನ್ಯ ಸಂಪಾದನೆಗಳು, ವಚನ ಚಳುವಳಿ ಮತ್ತು ದಲಿತರು, ವಚನ ಸಾಹಿತ್ಯ ಹರಿದಾಸ ಸಾಹಿತ್ಯ, ಔತ್ತರೇಯ ಸಂತರ ಮೇಲೆ ವೀರಶೈವ ಪ್ರಭಾವ, ವಚನ ಸಾಹಿತ್ಯವನ್ನು ಹೋಲುವ ಇತರ ಸಾಹಿತ್ಯ ಪ್ರಕಾರಗಳು, ಶಿಲ್ಪಗಳಲ್ಲಿ ಶಿವಶರಣರು, ಕೊಂಡಗುಳಿ ಕೇಶಿರಾಜ, ಜೇಡರ ದಾಸಿಮಯ್ಯ, ಮಾದಾರ ಚನ್ನಯ್ಯ, ಆಯ್ದಕ್ಕಿ ಮಾರಯ್ಯ, ಹರಳಯ್ಯ, ಮಧುವಯ್ಯ, ಕಿನ್ನರಿ ಬ್ರಹ್ಮಯ್ಯನವರು, ನುಲಿಯ ಚಂದಯ್ಯ, ಗಂಗಾಂಬಿಕೆ, ಬಸವಣ್ಣನವರ ಅಧ್ಯಾತ್ಮ ಸಂಗಾತಿ ನೀಲಲೋಚನೆ, ನಾಗಲಾಂಬಿಕೆ, ಅಕ್ಕಮಹಾದೇವಿ, ಮೋಳಿಗೆ ಮಹಾದೇವಿಯಮ್ಮ, ಆಯ್ದಕ್ಕಿ ಲಕ್ಕಮ್ಮ, ಶಿವಶರಣೆ ದುಗ್ಗಳೆ, ಶರಣೆ ಬೊಂತಾದೇವಿ, ವೀರಶೈವ ಪುರಾಣಗಳು, ವೀರಶೈವ ಚಂಪೂ ಸಾಹಿತ್ಯ, ವೀರಶೈವ ರಗಳೆ ಸಾಹಿತ್ಯ, ವೀರಶೈವ ಹಾಡುಗಬ್ಬಗಳು, ವೀರಶೈವ ತ್ರಿಪದಿ ಸಾಹಿತ್ಯ, ತ್ರಿಪದಿಯ ಸೀಮಾಪುರುಷ ಸರ್ವಜ್ಞ, ವೀರಶೈವ ಸ್ತೋತ್ರ ಸಾಹಿತ್ಯ, ವೀರಶೈವ ಷಟ್ಪದಿ ಸಾಹಿತ್ಯ-೧, ವೀರಶೈವ ಷಟ್ಪದಿ ಸಾಹಿತ್ಯ-೨, ಕನ್ನಡ ಶತಕ ಸಾಹಿತ್ಯದ ಆದ್ಯ ಪ್ರವರ್ತಕರು, ವೀರಶೈವ ಶತಕ ಸಾಹಿತ್ಯ, ವೀರಶೈವ ಶಾಸ್ತ್ರ ಗ್ರಂಥಗಳು, ನವೋದಯ ವೀರಶೈವ ಸಾಹಿತ್ಯ, ಬಸವಪ್ಪ ಶಾಸ್ತ್ರಿಗಳು, ಬಸವಪ್ಪ ಶಾಸ್ತ್ರಿಗಳ ಕಾವ್ಯ ಪ್ರತಿಭೆ, ಶ್ರೀ ಗೌರೀಶಂಕರ ಸ್ವಾಮಿಗಳು, ವೀರಶೈವ ಹಸ್ತಪ್ರತಿಕಾರರು, Work on Veerashaivism in English. ಕರ್ನಾಟಕದ

ಕೆಲವು ವೀರಶೈವ ರಾಜಮನೆತನಗಳು ಇವೇ ಮೊದಲಾದ ಅತ್ಯಂತ ಮಹತ್ವದ ವಿಚಾರ ಪ್ರಣೀತವಾದ ಸಾದರಪೂರ್ವಕವಾದ ಮನನೀಯವಾದ ಒಂದೊಂದು ರತ್ನಕಾಂತಿಯನ್ನೊಳಗೊಂಡು ಜಿಜ್ಞಾಸುಗಳ ಹೃದಯವನ್ನೇ ಸೂರೆಗೊಂಡು ಜ್ಞಾನ ಪ್ರಭಾ ಕಿರಣಗಳನ್ನು ಬೀರುತ್ತಲಿವೆ.

“ಕಲಾ ಶ್ರೀ” ವಿಭಾಗದಲ್ಲಿ— ನಾಟಕ ಸಾಹಿತ್ಯ ಮತ್ತು ಕಲೆಗೆ ವೀರಶೈವರ ಕೊಡುಗೆ, ಕರ್ನಾಟಕದಲ್ಲಿ ಚಲನಚಿತ್ರ ಉದ್ಯಮದ ಬೆಳವಣಿಗೆಗೆ ವೀರಶೈವರ ಕೊಡುಗೆ, ಸಂಗೀತಕ್ಕೆ ಶಿವಶರಣರ ಕೊಡುಗೆ, ಇಪ್ಪತ್ತನೆಯ ಶತಮಾನದ ಸಂಗೀತಕ್ಕೆ ವೀರಶೈವರ ಕೊಡುಗೆ, ವೀರಶೈವ ಪ್ರವಚನಕಾರರು, ಶರಣೆನ್ನಿರೋ ಸಿದ್ಧಗಂಗಾ ಶ್ರೀ ಗೆ ಮುಂತಾದ ಬರಹಗಳು ನುರಿತ ಕಲಾತಪಸ್ವಿಗಳ ಅನುಭಾವದ ಅಣಿಮುತ್ತುಗಳಾಗಿ ಹೊಳೆಯುತ್ತ ಕಲಾಪ್ರೇಮಿಗಳ ಹೃದಯಕ್ಕೆ ಶಾಂತಿ ಜಲ ಗಂಗಾಮೃತ ಪಾನ ಮಾಡಿಸುತ್ತಲಿವೆ.

“ಸಿದ್ಧಗಂಗಾ ಶ್ರೀ” ಮಹಾ ಸಾಗರವೆಂಬೆನೆ. ಆ ಸಮುದ್ರದ ಮಧ್ಯದಲ್ಲಿ ವಿಷಮುಖವುಳ್ಳ ಹೆಡೆಯೆತ್ತಿ ನಿಂತ ಮಹಾ ಕಾಳಿಂಗಮರ್ದನಗೆಯ್ವ ಶ್ರೀಕೃಷ್ಣ ಪರಮಾತ್ಮನಂತೆ ಕಂಗೊಳಿಸುತ್ತಾರೆ— ಪೂಜ್ಯ ಡಾ|| ಶಿವಕುಮಾರ ಮಹಾ ಸ್ವಾಮಿಗಳವರು.

“ಸಿದ್ಧಗಂಗಾ ಶ್ರೀ” ಸೃಷ್ಟಿಯೆಂಬೆನೆ. ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ಭೂಮಿ ಆಕಾಶವ ತುಂಬಿ ನಿಂದ ಬಾಲಮೂರ್ತಿ ವಾಮನನಂತೆ ಪರಿಶೋಭಿಸುತ್ತಾರೆ, ಪೂಜ್ಯ ಡಾ|| ಶಿವಕುಮಾರ ಶಿವಯೋಗಿಗಳು.

“ಸಿದ್ಧಗಂಗಾ ಶ್ರೀ” ಬಸವಣ್ಣನವರ “ಅನುಭವ ಮಂಟಪ” ವೆಂಬೆನೆ. ವಿಶ್ವಕಲ್ಯಾಣಗೆಯ್ವ ಮಹಾನುಭಾವಿ ಶರಣ ಶರಣೆಯರ ಮಧ್ಯದಲ್ಲಿ ಶೂನ್ಯ ಸಿಂಹಾಸನದಲ್ಲಿ ಶೋಭಾಯಮಾನವಾಗಿ ಕುಳಿತ ಆ ಪ್ರಭುದೇವರಂತೆ ಕಂಗೊಳಿಸುತ್ತಾರೆ. ಪೂಜ್ಯ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರು.

ಇಂತಹ ಮಹಾಮಹಿಮರಾದ ಶಿವಯೋಗಿ ಪುಂಗವರಾದ ಪರಮಪೂಜ್ಯ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯದರ್ಶನದ ಮಹಾಲಾಭವನ್ನು “ಕನ್ನಡ ಕವಿ ಕಾಳಿದಾಸ” ಪಡೆದುದಲ್ಲದೆ ನೂರೊಂದು ರೂಪಾಯಿಗಳ ಗೌರವಧನದೊಂದಿಗೆ ಆಶೀರ್ವಾದ ಶ್ರೀರಕ್ಷೆ ಹೊಂದಿ ಧನ್ಯನಾಗಿದ್ದಾನೆ. ಹೀಗೆ, ಪಂಡಿತಕವಿಕಲಾವಿದರನ್ನೂ ಮತ್ತು ನಾಡಿನ ಖ್ಯಾತ ಸಾಹಿತಿ ಲೇಖಕರನ್ನೂ ದಯಾಸಾಗರ ಪುಣ್ಯಮೂರ್ತಿಗಳಾದ ಶ್ರೀಗಳವರು ತಮ್ಮ ಪೂರ್ಣ ಹೃದಯ ಪ್ರೀತಿ, ವಾತ್ಸಲ್ಯ, ಅನುಕಂಪಗಳೊಂದಿಗೆ ಹಲವಂದದಲ್ಲಿ ಅನೇಕ ಮಹಾನುಭಾವಿಗಳನ್ನು ಗೌರವಿಸಿದುದಲ್ಲದೆ ಇನ್ನೂ ಕೆಲವು ಮಹಾ



ಶಯರಿಗೆ ಆಶ್ರಯ ಕಲ್ಪಿಸಿ, ಶ್ರೀರಕ್ಷೆಯಾಗಿ ಶ್ರೀ ಸಿದ್ಧಗಂಗೆಯಲ್ಲಿ ನಿಂದು ಮನುಕುಲೋದ್ಧಾರ ಚಿಂತನೆಯಲ್ಲಿದ್ದಾರೆ. ಹೀಗೆ ಶ್ರೀಗಳವರ ಅಪಾರ ಅನುಕಂಪೆ, ಆ ದಿವ್ಯಜ್ಞಾನ, ಶಿವಯೋಗ, ದಿವ್ಯದೃಷ್ಟಿ, ದಿವ್ಯಭಾವ, ದಿವ್ಯ ಮನೀಷೆ ಇವೆಲ್ಲವೂ ಪೂಜ್ಯರನ್ನು ಸಹಸ್ರ ಮುಖದಲ್ಲಿ ಸಹಸ್ರ ಬಗೆಯಾಗಿ ಈ ಸೃಷ್ಟಿಯನ್ನು ದೇವಸೃಷ್ಟಿಗೆ ಪರಿವರ್ತಿಸಿ ದೇವರಾಜ್ಯದ ಸ್ಥಾಪನೆಯ ಪ್ರಭುಕಾರ್ಯಕ್ಕೆ ತೊಡಗಿಸಿವೆ—ಎಂಬುದು ಅನುಭಾವಿಗಳಿಗೆ ಅರಿವಾಗದಿರದು.

“ಸಿದ್ಧಗಂಗಾ ಶ್ರೀ” ಬಹು ಅಮೂಲ್ಯ ಅದ್ಭುತ ಬೃಹದ್ಗ್ರಂಥರತ್ನ—ಇಲ್ಲಿ ಶ್ರೀಗಳವರ ಸಹಸ್ರ ಮುಖದ ಸಹಸ್ರ ಬಗೆಯ ಶಿವಕಾರ್ಯನಿರತ ನವರಂಗ ಭಾವಚಿತ್ರಗಳು ಚಿತ್ತಾಕರ್ಷಕವಾಗಿ ಕಂಗೊಳಿಸುತ್ತಿರುವುದೊಂದು ಅಮೋಘವಾದ ಅಪ್ರತಿಮ ಸುಂದರ ಆಕರ್ಷಣೆ ಪ್ರಪಂಚದ ಪ್ರಮುಖ ಧರ್ಮಗಳ ಪರಿಚಯದೊಂದಿಗೆ ವಿಶ್ವಧರ್ಮವಾಗಲಿಹ ವೀರಶೈವ ಅನುಭಾವಿ ಶರಣ ಧರ್ಮ ಜ್ಞಾನಾಮೃತ ಸೇಚನೆ ! ಕವಿಗಳಿಗೆ ಕವಿ ಕೋಗಿಲೆಗಳ ಮಧುರ ಗಾನ ! ಕಲಾವಿದರಿಗೆ ಕಲಾರಸಪಾನ ! ಸಾಹಿತಿಗಳಿಗೆ ಸಂದರ್ಭ ಗ್ರಂಥ ! ಸಂಶೋಧಕರಿಗೆ ಶುಭಾಶಯ ಕೃತಿ ! ವಿಮರ್ಶಕರಿಗೆ ವಿಮರ್ಶ ಜ್ಞಾನ ಶ್ರುತಿ ! ಭಕ್ತತತಿಗೆ ಭಕ್ತಿಗಂಗೆ ! ಧರ್ಮರತಿಗೆ ಧರ್ಮಗಂಗೆ ! ಜ್ಞಾನಿಗೆ ಜ್ಞಾನಗಂಗೆ ! ಮುಕ್ತಿಗೆ ಮುಕ್ತಿಗಂಗೆ ! ಧರ್ಮಗ್ರಂಥಗಳಿಗೆ ಈ “ಸಿದ್ಧಗಂಗಾ ಶ್ರೀ” ಧರ್ಮಗ್ರಂಥ ರಾಜ ! ಶಿವಯೋಗಿಗಳಿಗೆ ಶಿವಕುಮಾರ ಶಿವಯೋಗಿ ಶಿವತೇಜ !

ಒಟ್ಟಿನಲ್ಲಿ ಕನ್ನಡ ಧಾರ್ಮಿಕ ಸೃಷ್ಟಿಯಲ್ಲಿ ಹಾಗೂ ಸಾಹಿತ್ಯಧರ್ಮ ಸೃಷ್ಟಿಯಲ್ಲಿ ಇಷ್ಟು ಸರ್ವೋತ್ಕೃಷ್ಟವಾದ “ವಿಶ್ವಧರ್ಮಗ್ರಂಥ ರತ್ನ” ಈ ವರೆವಿಗೂ ಹುಟ್ಟಿ ಬರಲಿಲ್ಲವೆಂದವೆಂದರೆ ಅತಿಶಯೋಕ್ತಿಯೇನಲ್ಲ. ಕನ್ನಡ ಭುವನೇಶ್ವರಿಯ ಭಾಗ್ಯವಿಶೇಷದಿಂದ ಈ ಬೃಹದ್ಗ್ರಂಥ ಭೂಮಿಗೆ ಬಂದುದು—ಭಾರತೀಯರ ಭವ್ಯಜ್ಞಾನ ಬೆಳವಣಿಗೆಗೆ ಅಂತೆಯೇ ಮನುಕುಲದ ವಿಕಾಸ ವಿಶ್ಲೇಷಣೆಗೆ ಕಾರಣವಾಯಿತಲ್ಲದೆ ವಿಶ್ವಕ್ಕೆ ತಾರಕಮಂತ್ರ ಕೃತಿಯೆನಿಸಿತೆಂದು ಹೇಳಬಹುದು. ಹಾಗೆಯೇ ಈ ‘ಸಿದ್ಧಗಂಗಾ ಶ್ರೀ’ ಶಾಂತಿ ಮಂತ್ರ ಸೌಭಾಗ್ಯ ಸೂಚಕವೂ ಆಯಿತೆಂದು ಹೇಳಬಹುದಾಗಿದೆ.

ಈ ಗ್ರಂಥ ನೋಡಿ ಅದರ ಬಗೆಗೆ ನನ್ನ ಅನಿಸಿಕೆಗಳನ್ನೂ ವಿವರಿಸಿದ್ದೇನೆ. ಒಂದು ಜಲಭರಿತ ಗಿಂಡಿಯಲ್ಲಿ—ನಾನು ಒಂದು ದರ್ಪಣದೊಳಗೆ ಅಡಗಿದ (ಕಾಣುವ) ಆನೆಯೋಪಾದಿಯಲ್ಲಿ —ಗಿಂಡಿಯೊಳಗಿನ ನೀರನ್ನೇ ಕನ್ನಡಿಯನ್ನಾಗಿಸಿ ಅದರಲ್ಲಿ ಆ ಆನೆಯನ್ನು ತೋರಿಸಿದಂತೆ —‘ಸಿದ್ಧಗಂಗಾ ಶ್ರೀ’ ಯ ಬಗೆಗೆ ಕಿರು ಸಾಹಸ ಮಾಡಿದ್ದೇನೆ —ಇದೂ ಪೂಜ್ಯಪಾದರ ಕೃಪೆಯೇ.

ಪಂಡಿತವರ್ಯ ಪರೇಸೀಮೆ ಚನ್ನಪ್ಪನವರು ಹಾಗೂ ಪ್ರೊ : ಟಿ. ಆರ್. ಮಹಾದೇವಯ್ಯನವರು ಈ ಉಭಯ ಮಹಾನುಭಾವಿ ಶ್ರೀ ಸಂಪಾದಕರ ಮಹತ್ತರವಾದ ಶಿವಸೇವೆಯನ್ನು ವರ್ಣಿಸಲಳವಲ್ಲ. ಈ ಶಿವ ಸೇವೆ ಪೂಜ್ಯರ ಚರಣ ಸನ್ನಿಧಿಗೆ ಸಂದಿದೆ; ಶಾಂತಿ ತುಂಬಿದೆ.

(20ನೇ ಪುಟದಿಂದ)
ಅದರಲ್ಲಿ 'ಸಿದ್ಧಗಂಗಾ' ಮಾಸಪತ್ರಿಕೆಯು ಒಂದು. ಈ ಪತ್ರಿಕೆಯು ನಾಡಿನಾದ್ಯಂತ ಎಲ್ಲ ಜಿಲ್ಲೆಗಳಲ್ಲಿಯೂ ಅಧಿಕ ಸಂಖ್ಯೆಯಲ್ಲಿ ಪ್ರಸಾರವಾಗುತ್ತಿದೆ. ಇದು ಇಡೀ ತುಮಕೂರು ಜಿಲ್ಲೆಯ ಏಕೈಕ ಮಾಸಪತ್ರಿಕೆ. ಸಾಹಿತ್ಯಕ, ಸಾಂಸ್ಕೃತಿಕ ಧಾರ್ಮಿಕ. ವೈಚಾರಿಕ, ವೈಜ್ಞಾನಿಕ, ಮೊದಲಾದ ವಿವಿಧ ಲೇಖನ ಮಾಲೆಗಳಾನ್ನೊಳಗೊಂಡ ಪತ್ರಿಕೆ. ಉಪಯುಕ್ತ ವಿಷಯಗಳನ್ನೊಳಗೊಂಡ ಈ ಪತ್ರಿಕೆ ಜನಪ್ರಿಯವಾಗಿದೆ. ಈ ಪತ್ರಿಕೆಯು ಹೊರ ರಾಜ್ಯಗಳಲ್ಲಿಯೂ ಪ್ರಸಾರವಾಗುತ್ತಿದೆ. ಈ ಹಿಂದೆ ಸ್ವಾಮೀಜಿಯವರು ಕೆಲವು ಪ್ರಕಟನೆಗಳನ್ನು ಹೊರತಂದು ಜನತೆಯಲ್ಲಿ ಧರ್ಮ ಜಾಗೃತಿಯನ್ನು ಮಾಡಲು ಪ್ರಯತ್ನಿಸಿದ್ದಾರೆ. ಸ್ವಾಮೀಜಿಯವರ ಸುವರ್ಣಮಹೋತ್ಸವದಲ್ಲಿ ಹಳೆಯ ವಿದ್ಯಾರ್ಥಿಗಳು ಸ್ವಾಮೀಜಿಯವರಿಗೆ ಅರ್ಪಿಸಿದ "ಸಿದ್ಧಗಂಗಾ ಶ್ರೀ" ಎಂಬ ಅಭಿನಂದನಾ ಬೃಹತ್ ಸಂಪುಟ ಸಂಭಾವನಾ ಗ್ರಂಥ ಪರಂಪರೆಗೆ ಇಟ್ಟ ಹೊನ್ನಕಿರೀಟ. ಜ್ಞಾನ ಪಿಪಾಸುಗಳಿಗೆ ಸಂಶೋಧಕರಿಗೆ ಅತ್ಯಂತ ಉಪಯುಕ್ತವಾದ ಗ್ರಂಥ. ಸ್ವಾಮೀಜಿಯವರು ಮತ್ತೊಂದು ಬೃಹತ್ ಧಾರ್ಮಿಕ ಗ್ರಂಥವೊಂದನ್ನು ಪ್ರಕಟಿಸುವ ಯೋಜನೆಯುಳ್ಳವರಾಗಿದ್ದಾರೆ.

ಇತ್ತೀಚಿನ ಪರಿಸ್ಥಿತಿಯಲ್ಲಿ ನಾಡಿನಾದ್ಯಂತ ಜನತೆಯಲ್ಲಿ ದೈವಭಕ್ತಿ ಧರ್ಮ ಶ್ರದ್ಧೆಗಳು ಕ್ಷೀಣಿಸುತ್ತಿವೆ ಇದನ್ನ ಮನಗಂಡ ಸ್ವಾಮೀಜಿಯವರು ಕಳೆದ ಐದಾರು ವರ್ಷಗಳಿಂದ ವಿನೂತನವಾದ ಧರ್ಮ ಪ್ರಚಾರಕಾರ್ಯವನ್ನು ಕೈಗೊಂಡಿದ್ದಾರೆ. ಬೇಸಿಗೆ ಕಾಲದಲ್ಲಿ ಹತ್ತಾರುಹಳ್ಳಿಗಳಲ್ಲಿ ಒಂದು ದಿನದ ಕಾರ್ಯಕ್ರಮ, ಧರ್ಮ ಪ್ರಚಾರಕರಿಂದ ಪ್ರವಚನಗಳು, ಧಾರ್ಮಿಕಸಮ್ಮೇಳನಗಳು, ಉಚಿತದಾಸೋಹ ವ್ಯವಸ್ಥೆ ಇಡೀ ರಾತ್ರಿ "ಶ್ರೀ ಜಗಜ್ಜ್ಯೋತಿ ಬಸವೇಶ್ವರ" ನಾಟಕ, ಜಾತಿ ಮತ ಪಂಥಗಳೆಂಬ ಸಂಕುಚಿತ ಭಾವನೆಗಳಿಗೆ ತಿಲಾಂಜಲಿಯಿಟ್ಟು ಲೋಕೋಪಕಾರಕ ಕಲ್ಯಾಣ ಕಾರ್ಯಗಳಿಗೆ 850 ವರ್ಷಗಳ ಹಿಂದೆಯೇ ಆದ್ಯತೆ ನೀಡಿದ ಮಹಾವ್ಯಕ್ತಿಯ ಜೀವನಚರಿತ್ರೆ ಮತ್ತು ಸಂದೇಶಗಳ ಪ್ರಚಾರ. ಇಂದಿನ ಸಮಸ್ಯೆಗಳ ಪರಿಹಾರಕ್ಕೆ ಬಸವಣ್ಣನವರ ತತ್ವಾದರ್ಶಗಳ ಆಚರಣೆಯೇ ಪರಿಹಾರ ಎಂಬುದು ಶ್ರೀ ಶ್ರೀಗಳವರ ಸದಾಶಯ. ಇದೊಂದು "ಧಾರ್ಮಿಕ ದಾಸೋಹ" ಸರ್ವತ್ರ ಕಂಡುಬರುತ್ತಿರುವ ನೈತಿಕ ಪತನದ ವಿರುದ್ಧ ಸಾರಿರುವ ಧರ್ಮಸಮರ.

ಶ್ರೀ ಸ್ವಾಮೀಜಿಯವರು ಭವರೋಗ ವೈದ್ಯರಷ್ಟೇ ಅಲ್ಲ. ಶಾರೀರಿಕ ಚಿಕಿತ್ಸಕರೂ ಕೂಡ ಹೌದು. ಭಸ್ಮದ ಅಭಿಮಂತ್ರಣ, ಯಂತ್ರಧಾರಣೆ ಮುಂತಾದುವುಗಳಿಂದ ರೋಗ ಪೀಡಿತರಿಗೆ ಪರಿಹಾರ ಮಾರ್ಗವನ್ನು ತೋರಿಸಿಕೊಡುತ್ತಾರೆ. ಅದಲ್ಲದೆ ರೋಗರುಜಿನಗಳಿಂದ ಸಂರಕ್ಷಿಸುವ ಸಲುವಾಗಿ ಸುಸಜ್ಜಿತವೂ, ಆಧುನಿಕವೂ ಆದ ಬೃಹತ್ ಆಸ್ಪತ್ರೆಯೊಂದನ್ನು ನಿರ್ಮಾಣ ಮಾಡಲು ಸಂಕಲ್ಪಿಸಿದ್ದಾರೆ. ಸುವರ್ಣ ಮಹೋತ್ಸವ ಸಂದರ್ಭದಲ್ಲಿ ರಾಷ್ಟ್ರಪತಿ ಎನ್. ಸಂಜೀವರೆಡ್ಡಿಯವರಿಂದ ಆಸ್ಪತ್ರೆಯ ಶಂಕುಸ್ಥಾಪನೆಯನ್ನು ನೆರವೇರಿಸಲಾಯಿತು. ಆಸ್ಪತ್ರೆಯ ನಿರ್ಮಾಣ ಕಾರ್ಯಕ್ಕಾಗಿ ಅನೇಕ ಮಂದಿ ದಾನಿಗಳು ಮುಂದೆ ಬರುತ್ತಿದ್ದಾರೆ. ಯೋಜನೆಯನ್ನು ಕೈಗೆತ್ತಿಕೊಳ್ಳುವ ಆಲೋಚನೆಯಲ್ಲಿ ಸಮಿತಿಯು ಕಾರ್ಯಪ್ರವೃತ್ತವಾಗಿದೆ.

ಸ್ವಾಮೀಜಿಯವರು ಕೈಗೊಳ್ಳುವ ಪ್ರತಿಯೊಂದು ಕಾರ್ಯವೂ ಲೋಕಕಲ್ಯಾಣಕ್ಕಾಗಿ. ಮಾನವ ಕಲ್ಯಾಣಕ್ಕಾಗಿ. ಅವರ ಶ್ರಮದಿಂದಾಗಿ ಸರ್ವವೂ ವ್ಯವಸ್ಥಿತವಾಗಿ ನಡೆದುಬರುತ್ತವೆ. ಅವರ ವ್ಯವಹಾರವೇ ವರ್ತನೋಪದೇಶ. ಭಗವಾನ್ ಬಸವಣ್ಣನವರ ತತ್ತ್ವೋಪದೇಶವು ಶ್ರೀ ಶ್ರೀಗಳವರ ಆದರ್ಶ ನಡವಳಿಕೆಯಾಗಿದೆ. ಜಗತ್ತಿಗೆ ಸಂದೇಶವಾಗಿದೆ.

# ಮಾನವೀಯತೆ

—ಬಿ. ಸುಬ್ರಾಯ ಅಡಿಗ

೧೯೪೪ ರ ಘಟನೆ ___ ಎರಡನೇ ವಿಶ್ವಯುದ್ಧ ಜೋರಾಗಿ ನಡೆಯುತ್ತಿತ್ತು. ಜರ್ಮನಿಯ ಮೇಲೆ ಮಿತ್ರರಾಷ್ಟ್ರಗಳ ದಾಳಿ ನಿರಂತರ ನಡೆದಿತ್ತು. ಬಾಂಬು ಸುರಿಸುವ ವಿಮಾನಗಳಲ್ಲಿ ಒಂದು ಲೆಫ್ಟಿನೆಂಟ್ ರೇ ಹಡ್ಸನ್ ಎಂಬ ಅಮೇರಿಕನ್ ಸೇನಾಧಿಕಾರಿಯದಿತ್ತು. ಅದನ್ನು ಜರ್ಮನ್ ತೋಪುಗಳು ಹೊಡೆದುರುಳಿಸಲು ಸಜ್ಜಾಗಿದ್ದವು.

ಬೇರಾವ ಉಪಾಯವೂ ತೋರದಾಗ, ಆ ಸೇನಾಧಿಕಾರಿ ಗಾಳಿಕೊಡೆಯ ನೆರವಿನಿಂದ ಕೆಳಗೆ ಧುಮುಕಿದ. ಅವನಿಳಿದುದು ಇತ್ತೀಚೆಗಷ್ಟೇ ಉತ್ತನೆಲದಲ್ಲಿ? ಅವನ ಮೊಣಕೈಗೆ ಸ್ವಲ್ಪ ಪೆಟ್ಟಾಯಿತು.

ಅವನಿಳಿದ ಆ ಪ್ರದೇಶ ಡ್ಯೂಸಬರ್ಗ್. ತನ್ನನ್ನೇ ಹುಡುಕುತ್ತ ಸೇನೆಗಳು ಬರುವುವೆಂದು ಆತ ಚೆನ್ನಾಗಿ ಬಲ್ಲ. ಅವನು ಹರಿದಾಡುತ್ತ ಹರಿದಾಡುತ್ತ ಸಮೀಪದ ಒಂದು ಗುಡಿಸಲ ಹೊರಗಿದ್ದ ಲಾಯಕ್ಕೆ ತಲುಪಿದ; ಮತ್ತು ಅಲ್ಲಿದ್ದ ಹುಲ್ಲು ರಾಶಿಯ ಮೇಲೆ ಕಾಲುಚಾಚಿ ಒರಗಿಕೊಂಡ.

ತುಸುಹೊತ್ತಿನ ಬಳಿಕ ಎಚ್ಚರವಾದಾಗ ತಾನು ಉತ್ಕೃಷ್ಟವಾದ ಹಾಸಿಗೆಯೊಂದರ ಮೇಲೆ ಮಲಗಿದ್ದೇನೆಂದೂ ಸಮೀಪದಲ್ಲೇ ಒಬ್ಬಳು ಯುವತಿಯೂ, ಮಧ್ಯಮ ವಯಸ್ಸಿನ ಒಬ್ಬ ಪುರುಷನೂ ಇದ್ದಾರೆಂದೂ ಅವನರಿತ. ಅವರಿಬ್ಬರೂ ತುಂಬ ಆಶ್ಚರ್ಯದಿಂದ ಅವನನ್ನೇ ಎವೆಯಿಕ್ಕದೆ ನೋಡುತ್ತಿದ್ದರು. ಅವನಿಗೂ ಆಶ್ಚರ್ಯವಾಯಿತು.

ಅವನಿನ್ನೂ ಆರೋಗ್ಯ ಪಡೆದಿಲ್ಲವಾದುದರಿಂದ ಕೆಲದಿನಗಳವರೆಗೆ ಅಲ್ಲಿಯೇ ವಿಶ್ರಾಂತಿ ಪಡೆಯುವುದು ಲೇಸೆಂದು ಆ ಪುರುಷ ತನ್ನ ಹರುಕುಮುರುಕು ಇಂಗ್ಲೀಷನಲ್ಲಿ ಹೇಳಿದ.

ಮುಂದೆ ವಿಚಾರಿಸಿದಾಗ ಆ ಯುವತಿಯು ೧೦ ವರ್ಷದ ಮಗಳು ಮೊತ್ತಮೊದಲು ಲಾಯದಲ್ಲಿ ಅವನನ್ನು ಕಂಡಳೆಂದೂ ಅವಳಿಂದ ಸುದ್ದಿ ತಿಳಿದು ಅವರಿಬ್ಬರೂ ಅವನನ್ನು ಗುಡಿಸಲೊಳಗೆ ಕರೆದೊಯ್ದರೆಂದೂ ಸೇನಾಧಿಕಾರಿಗೆ ತಿಳಿಯಿತು. ಅಲ್ಲಿ ಅವರು ವೈಮಾನಿಕನ ಗಾಯಗಳಿಗೆ ಪಟ್ಟಿ ಕಟ್ಟಿ ಸೇವೆಮಾಡಿದರು.

ಹೀಗಿರುವಾಗ ಅದೊಂದು ದಿನ ಅವರಿಗೆ ಜರ್ಮನ್ ಸೇನೆಗಳು ಈ ಅಮೇರಿಕನನ್ನು ಹುಡುಕುತ್ತಿವೆಯೆಂದು ತಿಳಿಯಿತು. ಆಗ ಅವರು ಇವನನ್ನು ಒಂದು ಸುರಕ್ಷಿತಸ್ಥಳದಲ್ಲಿ ಬಚ್ಚಿಟ್ಟರು.

ಅಧಿಕಾರಿ ಪೂರ್ತಿ ಸ್ವಸ್ಥನಾಗುವವರಿಗೂ ಆ ಕಿರುಹುಡುಗಿ ನಿರಂತರ ಅವನ ಸೇವೆ ಮಾಡುತ್ತಿದ್ದಳು.

ಮುಂದೊಂದು ದಿನ ಆ ಅಧಿಕಾರಿ ತನ್ನ ಶಿಬಿರಕ್ಕೆ ಮರಳುವುದಾಗಿ ತಿಳಿಸಿದ. ಅದು ಅಲ್ಲಿಂದ ಸುಮಾರು ೧೨೧ ಮೈಲು ದೂರವಿತ್ತು.

ಆಗ ಆಶ್ರಯದಾತ ರೈತಪರಿವಾರ ಅವನಿಗೆ ಉಡಲು ಕೆಲವು ಚಿಂದಿಬಟ್ಟೆಗಳನ್ನು ತಂದಿತ್ತಿತು ಶತ್ರುಗಳ ದೃಷ್ಟಿಗೆ ಸಹಜವಾಗಿ ಬೀಳದಂತೆ ಮಾಡುವುದೇ ಇದರ ಉದ್ದೇಶ.

ಬೀಳ್ಕೊಂಡು ಹೊರಡುವ ವೇಳೆ ಆ ಹುಡುಗಿ ಅವನಿಗಿಂತಲೂ ತುಸುಮುಂದೆ ಹೋಗಿ ನಿಂತಿರುವುದು ತೋರಿತು.

"ನೀನೆಲ್ಲಿಗೆ ಹೊರಟಿದ್ದಿ ?" —ವೈಮಾನಿಕ ಪ್ರಶ್ನಿಸಿದ.

"ನಿಮ್ಮನ್ನು ಶಿಬಿರಕ್ಕೆ ತಲುಪಿಸಬೇಕೆಂದು ಹೊರಟಿರುವೆ. ಈ ಪ್ರದೇಶದ ಎಲ್ಲ ಭಾಗಗಳೂ ನನಗೆ ಪರಿಚಿತ. ನೀವೊಬ್ಬರೇ ಹೊರಟರೆ ಹಾದಿತಪ್ಪಿ ಶತ್ರುಗಳ ಕೈಗೆಸಿಗಬಹುದು."

ವೈಮಾನಿಕ ಅದೆಷ್ಟು ತಿಳಿಯ ಹೇಳಿದರೂ ಆಕೆ ಹಿಂದಿರುಗಲೊಪ್ಪಲಿಲ್ಲ. ಅವರಿಬ್ಬರೂ ಮುಂದರಿದರು. ಕೆಲವೊಮ್ಮೆ ಅವಳೊಬ್ಬಳೇ ಮುಂದೆ ಹೋಗಿ, ಶತ್ರುಸೈನಿಕರೆಲ್ಲಾದರೂ ಅಡಗಿದ್ದಾರೆಯೇ ?–ಎಂದು ಪರೀಕ್ಷಿಸಿ ವೈಮಾನಿಕನನ್ನು ಕರೆದೊಯ್ಯುತ್ತಿದ್ದಳು. ಶತ್ರುದೃಷ್ಟಿಯಿಂದ ಪಾರಾಗಲು ಕೆಲವೊಮ್ಮೆ ಬಳಸುಹಾದಿಯಿಂದ ಹೋಗಬೇಕಾಗುತ್ತಿತ್ತು.

ಕಟ್ಟಕಡೆಗೆ ಇವರಿಬ್ಬರೂ ಮಿತ್ರರಾಷ್ಟ್ರೀಯರ ಸೇನಾಶಿಬಿರಕ್ಕೆ ತಲುಪಿದರು. ಅಲ್ಲಿ ಆ ಅಧಿಕಾರಿ ತನ್ನ ಕತೆಯನ್ನು ಸಂಗಾತಿಗಳಿಗೆ ವಿವರಿಸುವುದರಲ್ಲೇ ಮಗ್ನನಾಗಿದ್ದಾಗ, ಈ ಪುಟ್ಟ ಸಂಗಾತಿ ಮೆಲ್ಲನೆ ಅಲ್ಲಿಂದ ಜಾರಿಬಿಟ್ಟಳು. ಮುಂದೆ ಆ ವಿಚಾರ ತಿಳಿದಾಗ, ಅವನಿಗೆ ತುಂಬಾ ದುಃಖವಾಯಿತು.

ಒಂದು ವರ್ಷದ ಬಳಿಕ ಆ ವೈಮಾನಿಕ ಮರಳಿ ಆ ಪ್ರದೇಶಕ್ಕೆ ಬಂದ.



ಆದರೆ ಆ ಗುಡಿಸಲು ಹಾಳುಬಿದ್ದಿತ್ತು. ಆ ಪುಟ್ಟ ರೈತಕುವರಿಯನ್ನು ಬಹಳಷ್ಟು ಹುಡಿಕಿದರೂ ಸಫಲತೆ ಸಿಗಲಿಲ್ಲ.

೧೯೪೬ರಲ್ಲಿ ಸ್ವದೇಶಕ್ಕೆ ಮರಳಿದಾಗಲೂ ಅವನು ತನ್ನ ಆಶ್ರಯದಾತ ಜರ್ಮನ್ ಪರಿವಾರವನ್ನು ಮರೆಯಲಿಲ್ಲ. ಆದರೆ ಆ ಜನ ಮತ್ತೆಲ್ಲಿ ಸಿಗಬೇಕು?

೧೯೫೪ರಲ್ಲಿ ಡ್ಯೂಸಬರ್ಗ್ ಪ್ರವಾಸದ ಸುಯೋಗ ಅವನಿಗೆ ಲಭಿಸಿದಾಗ, ಆತ ಆಗ ಬಲುಜೋರಾಗಿ ಅವರನ್ನು ಹುಡುಕಾಡಿದ. ಫ್ರೆಂಕ್‌ಫರ್ಟಿನ ಒಂದು ಹಿಂದುಳಿದ ಪ್ರದೇಶದಲ್ಲಿ ಆ ಪರಿವಾರ ವಾಸಿಸುತ್ತಿದೆಯೆಂದ ತಿಳಿಯಿತವನಿಗೆ- ಅಷ್ಟೊಂದು ಭರವಸೆಯಿಲ್ಲದೆಯೇ ಆತ ಆ ಮನೆಗೆ ಹೋಗಿ ಬಾಗಿಲು ತಟ್ಟಿದ; ಸುದೈವಕ್ಕೆ, ಆತ ಹುಡುಕುತ್ತಿದ್ದ ಪರಿವಾರವೇ ಅದು !

ಮುಂದಿನ ಘಟನೆ ಆಕಸ್ಮಿಕವೆಂದರೂ ಸರಿಯೇ. ೧೯ ವರ್ಷದ ಸುಂದರ ತರುಣಿಯಾಗಿದ್ದ ಆ ಪುಟ್ಟಹುಡುಗಿ ಅವನನ್ನು ಕಾಣುತ್ತಲೇ ಭಾವಾವೇಶದಲ್ಲಿ ಹೀಗೆಂದಳು:– "ಎಂದಾದರೊಂದು ದಿನ ನೀವು ನಮಗೆ ಕಾಣಸಿಗುವಿರೆಂಬ ದೃಢವಿಶ್ವಾಸ ನನಗಿತ್ತು. ಅದಕ್ಕಾಗಿ ನಾನು ನಿರಂತರ ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದೆ. ನಿಮ್ಮ ಮೇಲೆ ನನಗೆ ಅಪಾರ ಪ್ರೇಮವಿದೆ."

ಹಡ್ಸನ್ ಸ್ವದೇಶಕ್ಕೆ ಮರುಳುವ ಮುನ್ನವೇ ಆ ತರುಣಿಯನ್ನು ಮದುವೆಯಾದ.

(ಹಿಂದಿಯಿಂದ)

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.